

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ಸಂಪ್ರಬಂಧ

# ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ


ನಿಬಂಧಕಾರರು

**ಶ್ರೀನಿವಾಸ .ಎಂ**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕವಿವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಬಿ.ನಂ.ಚಂದ್ರಯ್ಯ**

ವಿಶ್ರಾಂತ ಭಾಷಾವಿಜ್ಞಾನ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು





ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೦೯-೧೦



ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ಸಂಪ್ರಬಂಧ

# ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ


ನಿಬಂಧಕಾರರು

ಶ್ರೀನಿವಾಸ .ಎಂ

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಬ್ರಿ.ನಂ.ಚಂದ್ರಯ್ಯ

ಕನ್ನಡ

ವಿಶ್ರಾಂತ ~~ಭಾಷಾವಿಜ್ಞಾನ~~ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು



ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೦೯-೧೦

# ದೃಢೀಕರಣ ಪತ್ರ

೨೦೦೯-೧೦ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00419**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ಎಂ.ಶ್ರೀನಿವಾಸ ಅವರು ನನ್ನ ಮಾರ್ಗದರ್ಶನದಲ್ಲಿ **"ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಮೈಸೂರು
೨೨-೦೮-೨೦೧೦

(ಡಾ. ಬಿ.ನಂ.ಚಂದ್ರಯ್ಯ)
ಮಾರ್ಗದರ್ಶಕರು
ವಿಶ್ರಾಂತ ಭಾಷಾವಿಜ್ಞಾನ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಅಭ್ಯರ್ಥಿಯ ಘೋಷಣಾ ಪತ್ರ

**"ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ **KVTMKS-00419**ರ ವಿದ್ಯಾರ್ಥಿಯಾದ ನಾನು ೨೦೦೯-೧೦ನೇ ಸಾಲಿನ ಪರೀಕ್ಷೆಗಾಗಿ ಡಾ. ಬಿ.ನಂ.ಚಂದ್ರಯ್ಯ, ವಿಶ್ರಾಂತ ಭಾಷಾವಿಜ್ಞಾನ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Srinivasa .M

**ಮೈಸೂರು**
ದಿನಾಂಕ: ೨೨-೦೮-೨೦೧೦

**(ಎಂ.ಶ್ರೀನಿವಾಸ)**
೨೦೦೯-೧೦ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# "ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ"

## ಪರಿವಿಡಿ



*****

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕರ್ನಾಟಕ ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತವಾದ, ಸಂಪದ್ಭರಿತವಾದ ನಾಡು. ಮಲೆನಾಡು ಬೆಟ್ಟಗುಡ್ಡಪ್ರದೇಶ, ಕರಾವಳಿಯ ಸೊಬಗನ್ನು ಹೆಚ್ಚಿಸಿಕೊಂಡು ನಾಡಿನ ಹಿರಿಮೆಯನ್ನು ಗಳಿಸಿಕೊಂಡಿದೆ. ಹಲವು ಬಗೆಯ ವೃತ್ತಿ, ವೃತ್ತಿಯ ವೈವಿಧ್ಯತೆಯಿಂದ ಜನರ ಬದುಕು, ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳು, ವಿಭಿನ್ನ ಸಂಸ್ಕೃತಿಯ ಸಂಪರ್ಕದಿಂದ ಕರ್ನಾಟಕ ಶ್ರೀಮಂತವಾದ ನಾಡಾಗಿ ಮೆರೆದಿದೆ. ಈ ಕಾರಣದಿಂದ ಜಾನಪದ ಕ್ಷೇತ್ರದಲ್ಲೂ ಹುಲುಸಾದ ಫಸಲನ್ನು ಬೆಳೆದಿರುವುದನ್ನು ಕಾಣಬಹುದು.

ಜಾನಪದ ಕ್ಷೇತ್ರ ಒಂದು ಪರಿಸರದ ಸೃಷ್ಟಿ. ಆ ಪರಿಸರ ಜನರ ಸರ್ವಸ್ವವನ್ನು ತನ್ನ ಗರ್ಭದಲ್ಲಿ ಹುದುಗಿಸಿಟ್ಟುಕೊಂಡಿದೆ. ಹುಟ್ಟಿನಿಂದ ಸಾವಿನವರೆಗೆ ಹಾಗೂ ಅದರ ನಂತರದ ಆಚರಣೆಗಳು ಈ ಜಾನಪದದ ದೇಹದಲ್ಲಿ ತುಂಬಿಕೊಂಡಿದೆ. ಇದರಿಂದ ಜಾನಪದ ತನ್ನದೇ ಆದ ವಿಶಿಷ್ಟತೆಯನ್ನು ಗಳಿಸಿಕೊಂಡಿದೆ. ಈ ದೃಷ್ಟಿಯಿಂದ ಜಾನಪದ ಒಳಗೊಳ್ಳದ ವಿಷಯವೇ ಇಲ್ಲ. ಒಂದೊಂದು ಸನ್ನಿವೇಶದಲ್ಲಿ ನಡೆದ ಘಟನೆಗಳೂ, ವಿಶೇಷ ಅರ್ಥವನ್ನೂ, ಸಂಬಂಧವನ್ನು ಹೊಂದಿರುತ್ತವೆ. ಈ ಹಿನ್ನೆಲೆಯಿಂದ ನಿರ್ದಿಷ್ಟ ಜನಾಂಗದ ಹಾಗೂ ಆ ಪ್ರದೇಶದ ಸಂಸ್ಕೃತಿ ನಿರ್ಮಾಣ–ಗೊಳ್ಳುತ್ತದೆ.

ಕರ್ನಾಟಕದ ಜಾನಪದ ಅಧ್ಯಯನಕ್ಕೆ ತನ್ನದೇ ಆದ ಮಹತ್ವವಿದೆ. ಕನ್ನಡದಲ್ಲಿ ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಶಿಷ್ಟ ಮಹಾಕಾವ್ಯಗಳ ಬಗ್ಗೆ ಕಳೆದ ಎರಡು ದಶಕಗಳಿಂದ ಸಾಕಷ್ಟು ಅಧ್ಯಯನಗಳು ನಡೆದಿವೆ. ಇನ್ನೂ ಕೂಡ ಆರಂಭದ ಹಂತದಲ್ಲೇ ಇರುವಂತಿದ್ದು. ಜನಪದ ಕಾವ್ಯಗಳ ಬಗ್ಗೆ ಅಧ್ಯಯನ ನಡೆಯಬೇಕಾಗಿದೆ. ಈ ಕ್ಷೇತ್ರದಲ್ಲಿ ನಡೆದಿರುವ ಕೆಲಸಗಳು ತೃಪ್ತಿಕರವಾಗಿಲ್ಲ ಹಾಗೂ ಸಮಗ್ರವಾಗಿ ಸಂಗ್ರಹವೂ ಆಗಿಲ್ಲ. ಮೊಟ್ಟಮೊದಲಿಗೆ ಕರ್ನಾಟಕದಲ್ಲಿ ಜನಪದ ಮಹಾಕಾವ್ಯಗಳಿವೆ ಎಂಬುದನ್ನು ಗುರುತಿಸಿ, ಅವುಗಳನ್ನು ಸಂಗ್ರಹಮಾಡಿ ಅದಕ್ಕೆ ಅಧ್ಯಯನದ ಚೌಕಟ್ಟನ್ನು ಹಾಕಿದವರು ಪ್ರೊ. ಜೀ.ಶಂ.ಪರಮಶಿವಯ್ಯನವರು. ಇವರು ತಮ್ಮ 'ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು' ಎಂಬ ಮಹತ್ವಪೂರ್ಣವಾದ ಗ್ರಂಥದಲ್ಲಿ ಕನ್ನಡದಲ್ಲಿರುವ ಜನಪದ ಕಥನಗೀತೆಗಳು, ಖಂಡಕಾವ್ಯಗಳು, ಮಹಾಕಾವ್ಯಗಳು ಯಾವುವು? ಎಂಬುದನ್ನು ಗುರುತಿಸಿ ಅಧ್ಯಯನ ನಡೆಸಿದ್ದಾರೆ. 'ಡಾ. ತೀ.ನಂ.ಶಂಕರ

ನಾರಾಯಣ ಅವರ ಪ್ರಕಾರ ಜನಪದ ಮಹಾಕಾವ್ಯಗಳು "ಗತಕಾಲದ ಜನರ ಲೋಕದೃಷ್ಟಿಯನ್ನು ಅಥವಾ ಅವರ ಬದುಕಿನ ದೃಷ್ಟಿಕೋನವನ್ನು, ಅವರ ಆಸೆ ಆಶೋತ್ತರಗಳನ್ನು ಮಾತ್ರ ಹೇಳುತ್ತಿಲ್ಲ. ಅವು ಇಂದಿಗೂ ಜನರ ಜೀವನದಲ್ಲಿ ಪರಿಣಾಮ ಬೀರುತ್ತಿವೆ"[೧] ಎಂದು ಹೇಳಿದ್ದಾರೆ. ಜನಪದ ಕಾವ್ಯಗಳು ಆಯಾ ಸಾಂಸ್ಕೃತಿಕ ವರ್ಗದ ಪುರಾಣಗಳೇ ಆಗಿವೆ.

'ವೃತ್ತಿಗಾಯಕರ ಕಂಠಶ್ರೀ ಹೊತ್ತು ತಂದ ಜನಪದ ಮಹಾಕಾವ್ಯಗಳಲ್ಲಿ ದೇವರಗುಡ್ಡರ ಮಲೆಯ ಮಾದೇಶ್ವರ, ನೀಲಗಾರರ ಮಂಟೇಸ್ವಾಮಿ ಮಹಾಕಾವ್ಯ, ಚೌಡಿಕೆಯವರು, ನೀಲಗಾರರು ಹಾಗೂ ಗೊಂದಲಿಗರೂ ಹಾಡುವ ಎಲ್ಲಮದೇವಿ ಕಾವ್ಯಗಣಿಯವರು ಹಾಡುವ ಜುಂಜಪ್ಪನ ಕಾವ್ಯ, ಗೊರವರು ಹಾಡುವ ಮೈಲಾರ ಲಿಂಗನಕಾವ್ಯ, ದೇವರಗುಡ್ಡರು, ನೀಲಗಾರರು, ತಂಬೂರಿಯವರು ಹಾಗೂ ಕರಪಾಲದವರು ಹಾಡುವ ಜನಪದ ಬಸವಪುರಾಣ, ದಕ್ಷಿಣ ಕನ್ನಡದ ಸಿರಿ, ಕೊಡಗಿನ ಬಾಯಿನ ಇವಲ್ಲದೆ ವಿವಿಧ ವೃತ್ತಿಗಾಯಕರಲ್ಲಿ ಹಾಗೂ ಹೆಂಗಸರ ಹಾಡ್ಗತೆಗಳಲ್ಲಿ ಸಿಗುವ ಜನಪದ ರಾಮಾಯಣ, ಜನಪದ ಮಹಾಭಾರತಗಳು ಸದ್ಯಕ್ಕೆ ಗುರುತಿಸಲಾಗಿರುವ ಮಹಾಕಾವ್ಯಗಳು. ಆದರೆ ವ್ಯಾಪಕವಾದ ಕ್ಷೇತ್ರಕಾರ್ಯದ ಕೊರತೆಯಿಂದ ಮಹಾಕಾವ್ಯಗಳ ಅಧ್ಯಯನ ಇನ್ನೂ ಅಪೂರ್ಣವಾಗಿದೆ'.[೨]

ಸಾಹಿತ್ಯ ಪ್ರಕಾರಗಳಲ್ಲಿ ಮಹಾಕಾವ್ಯ ಬೇರೆ ಬೇರೆ ಕಾರಣಗಳಿಗಾಗಿ ಮೊದಲಿನಿಂದಲೂ ವಿಶೇಷವಾದ ಮಹತ್ವಹೊಂದಿದೆ. ಭಾವಗೀತೆ, ಕಥನಕಾವ್ಯ, ಖಂಡಕಾವ್ಯ, ಮಹಾಕಾವ್ಯ ಈ ೪ ಪ್ರಕಾರಗಳಲ್ಲಿ ಭಾವಗೀತೆಗೆ ಮತ್ತು ಇತರ ೩ ಪ್ರಕಾರಗಳಿಗೆ ವ್ಯತ್ಯಾಸವಿದೆ. ಭಾವಗೀತೆ ಪ್ರಧಾನವಾಗಿ ಭಾವನೆಯನ್ನು ಪ್ರತಿಬಿಂಬಿಸಿದರೆ ಉಳಿದ ೩ ಪ್ರಕಾರಗಳು ಕಥನ ಪ್ರಧಾನವಾಗಿರುತ್ತವೆ. ಕಥನಕಾವ್ಯದ ವ್ಯಾಪ್ತಿ ಚಿಕ್ಕದು, ಖಂಡಕಾವ್ಯವೆಂದರೆ ಕಥನಕವನಗಳ ಮುಂದುವರಿದ ರೂಪವೇ ಖಂಡಕಾವ್ಯ. ಇದರ ವ್ಯಾಪ್ತಿ ಕಥನಕವನಕ್ಕಿಂತ ದೊಡ್ಡದು. ಮಹಾಕಾವ್ಯಕ್ಕಿಂತ ಚಿಕ್ಕದು. ಮಹಾಕಾವ್ಯದ ವ್ಯಾಪ್ತಿ ದೊಡ್ಡದು. ಅನೇಕ ಪಾತ್ರಗಳು, ಘಟನೆಗಳು, ದೀರ್ಘವಾದ ಕಥೆಯುಳ್ಳ ವಿಸ್ತಾರವಾದ ವಿಚಾರಗಳನ್ನು ಹೊಂದಿದೆ. ಮಹಾಕಾವ್ಯ ಒಂದು ದೇಶದ, ಒಂದು ಸಾಂಸ್ಕೃತಿಕ ವರ್ಗದ ಆಕಾಂಕ್ಷೆಗಳನ್ನು ಅಭಿವ್ಯಕ್ತಿಸುವ ಸಾಧನವಾಗಿದೆ. ಧೀರನಾದ

---

೧. ಕರ್ನಾಟಕ ಜನಪದ ಮಹಾಕಾವ್ಯಗಳು – ಪ್ರಸ್ತಾವನೆ ಪುಟ iv, ತೀ.ನಂ.ಶಂಕರ–ನಾರಾಯಣ.

೨. ಕರ್ನಾಟಕ ಜನಪದ ಮಹಾಕಾವ್ಯಗಳು – ಲೇಖನ ಜನಪದ ರಾಮಾಯಣ ಮತ್ತು ಮಹಾಭಾರತ, ಡಾ. ಪಿ.ಕೆ.ರಾಜಶೇಖರ.

ನಾಯಕ, ಆತನಿಗೆ ವೀರೋಧಿಯಾದ ಖಳನಾಯಕ, ಈ ಎರಡು ಶಕ್ತಿಗಳ ನಡುವಣ ಹೋರಾಟ, ಒಳಿತು ಕೆಡಕುಗಳ ಸಂಘರ್ಷ, ಇಲ್ಲಿ ಒಳ್ಳೆಯದಕ್ಕೆ ಜಯ ಲಭಿಸುವುದು. ದುಷ್ಟಶಕ್ತಿಗಳ ನಾಶವಾಗುವುದು, ಮನುಷ್ಯರ ಜೀವನವನ್ನು ದೈವಿಕ ಮತ್ತು ದೈವಿಕವಲ್ಲದ ಶಕ್ತಿಗಳು ನಿಯಂತ್ರಿಸುವುದು, ನಿರ್ಧರಿಸುವುದು, ಇಡೀ ಸಮುದಾಯದ ಆಸೆ, ಆಶೋತ್ತರಗಳು ಈ ಮಹಾಕಾವ್ಯಗಳಲ್ಲಿ ಕಂಡುಬರುತ್ತದೆ.

ಮಹಾಕಾವ್ಯಗಳನ್ನು ೩ ಬಗೆಯಾಗಿ ವರ್ಗೀಕರಿಸಿದ್ದಾರೆ. ಅವುಗಳೆಂದರೆ

೧) ರಾಷ್ಟ್ರೀಯ ಮಹಾಕಾವ್ಯಗಳು ಇವುಗಳೆಂದರೆ ರಾಮಾಯಣ, ಮಹಾಭಾರತ ಇಲಿಯಡ್, ಒಡಿಸ್ಸಿ ಮುಂತಾದವು.

೨) ಏಕಕರ್ತೃಕ ಮಹಾಕಾವ್ಯಗಳು ಇವುಗಳೆಂದರೆ, ವರ್ಜಿಲ್‌ನ ಈನಿಯಡ್ ಡಾಂಟೆಯ ಡಿವೈನ್ ಕಾಮಿಡಿ, ಮಿಲ್ಟನ್ನನ ಪ್ಯಾರಡೈಸ್ ಲಾಸ್ಟ್, ಕುವೆಂಪುರವರ 'ಶ್ರೀರಾಮಾಯಣದರ್ಶನಂ, ಗೋಕಾಕರ 'ಭಾರತ ಸಿಂಧೂರಶ್ಮಿ', ಪು.ತಿ.ನ. ಅವರ 'ಶ್ರೀಹರಿಚರಿತ', ಪಂಪನ 'ವಿಕ್ರಮಾರ್ಜುನ ವಿಜಯ'.

೩) ಜನಪದ ಮಹಾಕಾವ್ಯಗಳು; ಫಿನ್‌ಲ್ಯಾಂಡಿನ ಕಾಲೇವಾಲ, ಮಲೆಯ ಮಾದೇಶ್ವರ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪನ ಕಾವ್ಯ, ಪಿರಿಯಾಪಟ್ಟಣ ಕಾಳಗ, ಜನಪದ ರಾಮಾಯಣ, ಜನಪದ ಮಹಾಭಾರತ, ಜನಪದ ಬಸವಣ್ಣ, ಡಣ್ಣಾಯಕ ಚೆನ್ನಬಸವಣ್ಣ ಮುಂತಾದವು.[೧]

ಕರ್ನಾಟಕದಲ್ಲಿ ಜನಪದ ಅಧ್ಯಯನ ಬಹಳಷ್ಟು ಕಾಲ ಬಿಡಿಗೀತೆಗಳು, ಕಥನಕಾವ್ಯಗಳು, ಲಾವಣಿಗಳು, ಕಥೆ, ಗಾದೆ, ಒಗಟು ಈ ಕ್ಷೇತ್ರಗಳಿಗೆ ಸೀಮಿತವಾಗಿತ್ತು. ಮತ್ತಿಘಟ್ಟ ಕೃಷ್ಣಮೂರ್ತಿಯವರು 'ಏಳುಕೊಳ್ಳದ ಎಲ್ಲಮ್ಮ' ಎಂಬ ಕಾವ್ಯವನ್ನು ಮತ್ತು ಸಂಪ್ರದಾಯವನ್ನು ಸ್ಥೂಲವಾಗಿ ಪ್ರಸ್ತಾಪ ಮಾಡಿದ್ದಾರೆ. ನಂತರ ಮಲೆಯ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಸವದತ್ತಿಎಲ್ಲಮ್ಮ ಈ ಮಹಾಕಾವ್ಯಗಳ ಬಗ್ಗೆ ಸಂಗ್ರಹಮಾಡಿ ಅದರ ಬಗ್ಗೆ ಸಂಶೋಧನೆ ನಡೆಸಿದವರು ಪ್ರೊ. ಜೀ.ಶಂ.ಪ.ರವರು. ಇವರು ತಮ್ಮ 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ಎಂಬ ಮಹತ್ವದ ಕೃತಿಯನ್ನು ಹೊರತಂದು, ಧಾರ್ಮಿಕ ಸಂಪ್ರದಾಯಗಳ ಬಗ್ಗೆ ಅದಕ್ಕೆ ಹೊಂದಿಕೊಂಡಿರುವ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ಅಭ್ಯಾಸ ಮಾಡಿದ್ದಾರೆ. ಪ್ರೊ. ಜೀ.ಶಂ.ಪರಮಶಿವಯ್ಯನವರೆ ಪ್ರಕಟಿಸಿರುವ ಮಂಟೇಸ್ವಾಮಿ ಕಾವ್ಯ

೧. ಡಾ. ತೀ.ನಂ.ಶಂಕರನಾರಾಯಣ – ಜನಪದ ಮಹಾಕಾವ್ಯ, ಪುಟ. ೨೫.

ಉತ್ತಮವಾಗಿದೆ. ಡಾ. ಪಿ.ಕೆ.ರಾಜಶೇಖರವರು ಬರೆದಿರುವ ಸುದೀರ್ಘವಾದ 'ಮಲೆಯ ಮಾದೇಶ್ವರ' ಕಾವ್ಯ ಅತ್ಯಂತ ಮಹತ್ವದ ಕಾವ್ಯವಾಗಿದೆ. ರಾಗೌ ಮತ್ತು ಪಿ.ಕೆ.ಆರ್. ಇಬ್ಬರು ಒಟ್ಟಾಗಿ ಸೇರಿ ಪ್ರಕಟಿಸಿರುವ ಜನಪದ ರಾಮಾಯಣ, ಜನಪದ ಮಹಾಭಾರತ, ಜನಪದ ಬಸವಪುರಾಣ ಮಹಾಕಾವ್ಯಗಳು ಜನಪದಕ್ಕೆ ಸಂಬಂಧಿಸಿದ ಆರಂಭಿಕ ಪ್ರಯತ್ನಗಳಾಗಿವೆ.

ಜನಪದ ಮಹಾಕಾವ್ಯಗಳಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಆರಂಭದ ಪ್ರಯತ್ನಗಳು ಮಾತ್ರ ನಡೆದಿದೆ. ಹಾಗೂ ಸಂಶೋಧನಾ ಕ್ಷೇತ್ರಕ್ಕೆ ಜಾನಪದ ಮಹಾಕಾವ್ಯಗಳು ಹೆಚ್ಚಿನ ಮಾಹಿತಿಯನ್ನು ಒದಗಿಸಿಕೊಡುತ್ತಿವೆ. ನಮ್ಮ ಕರ್ನಾಟಕದ ಜನಪದ ಮಹಾಕಾವ್ಯಗಳಾದ ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ಮತ್ತು ಮೈಲಾರಲಿಂಗನ ಕಾವ್ಯ, ಪಿರಿಯಾಪಟ್ಟಣ ಕಾಳಗ, ಏಳುಕೊಳ್ಳದ ಎಲ್ಲಮ್ಮ, ಜನಪದ ಬಸವಣ್ಣ, ಜನಪದ ರಾಮಾಯಣ ಮತ್ತು ಮಹಾಭಾರತಗಳು ಹೆಚ್ಚಿನ ಮಾಹಿತಿಯನ್ನು ಒದಗಿಸಿಕೊಟ್ಟಿವೆ. ಈ ಜನಪದ ಮಹಾಕಾವ್ಯಗಳಲ್ಲಿ ಅಡಗಿರುವ ಸೂಕ್ಷ್ಮ ವಿಚಾರಗಳನ್ನು ಹೊರತೆಗೆಯುವ ಪ್ರಯತ್ನಗಳು ನಡೆಯಬೇಕಿದೆ. ಆ ಕಾರಣದಿಂದ ೫(ಐದು) ಮಹಾಕಾವ್ಯಗಳಾದ ಮಲೆಯ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಪಿರಿಯಾಪಟ್ಟಣ ಕಾಳಗ, ಡಣ್ಣಾಯಕ ಚನ್ನಬಸವಣ್ಣ ಈ ಕಾವ್ಯಗಳಲ್ಲಿ ಅಡಗಿರುವ ಕೌಟುಂಬಿಕ ವಿಚಾರಗಳ ಬಗ್ಗೆ ಅಧ್ಯಯನ ಮಾಡಲು ಹೊರಟಿದ್ದೇನೆ. ಇದರಿಂದ 'ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ' ಎಂಬ ಶೀರ್ಷಿಕೆ ಅಡಿಯಲ್ಲಿ ನಾನು ಈ ನಿಬಂಧವನ್ನು ರಚಿಸಲು ಈ ಮೇಲಿನ ೫ ಕಾವ್ಯಗಳನ್ನು ಆಯ್ಕೆಮಾಡಿಕೊಂಡಿರುತ್ತೇನೆ.

ಈ ಮಹಾಕಾವ್ಯಗಳಲ್ಲಿ ಬರುವ ಜನರ ಬದುಕು, ಆಚಾರ-ವಿಚಾರಗಳನ್ನು, ಸಂಪ್ರದಾಯಗಳನ್ನು, ನಂಬಿಕೆಗಳನ್ನು ಅಧ್ಯಯನ ಮಾಡಬೇಕಾದುದು ಈ ನಿಬಂಧಕ್ಕೆ ಸೂಕ್ತ ಎಂದು ಭಾವಿಸಿರುತ್ತೇನೆ. ಈ ಮೇಲ್ಕಂಡ ಶೀರ್ಷಿಕೆಯ ಅಡಿಯಲ್ಲಿ ಬರುವ ಜನಪದ ಕಾವ್ಯಗಳು ರಚನೆಯಾಗಲು ಪ್ರೇರಣೆ ಪ್ರಭಾವ ಬೀರಿದ ಅಂಶಗಳಾವುವು ಮತ್ತು ಜನಪದ ಕ್ಷೇತ್ರ ಅಧ್ಯಯನ ಕರ್ನಾಟಕದಲ್ಲಿ ಯಾವಾಗ ಪ್ರಾರಂಭವಾಯಿತು? ಮತ್ತು ಭಾರತದಲ್ಲಿ ಇರುವ ಜನಪದ ಕಾವ್ಯಗಳು ಯಾವುವು? ಇವುಗಳನ್ನು ಅಧ್ಯಯನ ಮಾಡಬೇಕಾಗಿದೆ. ಜನಪದ ಕಾವ್ಯಗಳು ಭಾರತದಲ್ಲಿ ಎಷ್ಟಿವೆ? ಜನಪದ ಮಹಾಕಾವ್ಯಗಳ ಪ್ರಕಾರಗಳು ಅವುಗಳನ್ನು ವರ್ಗೀಕರಣದ ಬಗ್ಗೆ ಮತ್ತು ಜನಪದ ಕಾವ್ಯಗಳು ಕರ್ನಾಟಕದಲ್ಲಿ ಯಾವುವು? ಜನಪದ ಮಹಾಕಾವ್ಯಗಳ ಲಕ್ಷಣಗಳೇನು? ಜನಪದ ಕಾವ್ಯಗಳಲ್ಲಿ ಧಾರ್ಮಿಕ ಕಾವ್ಯಗಳೆಷ್ಟು? ವೀರಕಾವ್ಯಗಳೆಷ್ಟು? ಎಂಬುದನ್ನು ವರ್ಗೀಕರಿಸಲು ಈ ಅಧ್ಯಯನದ ಉದ್ದೇಶವಾಗಿದೆ.

ಜನಪದ ಕಾವ್ಯಗಳಾದ ಮಲೆಮಾದೇಶ್ವರ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪನ ಕಾವ್ಯ, ವೀರಕಾವ್ಯಗಳಾದ ಪಿರಿಯಾಪಟ್ಟಣಕಾಳಗ ಮತ್ತು ಚಿಕ್ಕಡಣ್ಣಾಯಕ ಚೆನ್ನಬಸವಣ್ಣ ಎಂಬ ೫ ಕಾವ್ಯಗಳನ್ನು ಆಯ್ಕೆಮಾಡಿಕೊಂಡಿದ್ದು ಇದರಲ್ಲಿ ಪಿ.ಕೆ.ರಾಜಶೇಖರರವರು ಬರೆದಿರುವ 'ಮಲೆಮಾದೇಶ್ವರ', ಪ್ರೊ. ಹಿ.ಚಿ.ಬೋರಲಿಂಗಯ್ಯನವರು ಸಂಪಾದಿಸಿರುವ 'ಮಂಟೆಸ್ವಾಮಿ ಕಾವ್ಯ', ಚೆಲುವರಾಜು ಸಂಪಾದಿಸಿರುವ – ಜುಂಜಪ್ಪನಕಾವ್ಯ ಪಿ.ಕೆ.ರಾಜಶೇಖರರವರು ಸಂಪಾದಿಸಿರುವ 'ಪಿರಿಯಾಪಟ್ಟಣ ಕಾಳಗ' ಮತ್ತು ಮಲೆಯೂರು ಗುರುಸ್ವಾಮಿ ಮತ್ತು ದೇವಯ್ಯ ಹರವೆ ಸಂಪಾದಿಸಿರುವ ಚಿಕ್ಕಡಣ್ಣಾಯಕ ಚೆನ್ನಬಸವಣ್ಣ ಈ ಕಾವ್ಯಗಳನ್ನು ನನ್ನ ಈ ನಿಬಂಧವನ್ನು ಬರೆಯಲು "ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ" ಎಂಬ ಶೀರ್ಷಿಕೆಯನ್ನು ಇಟ್ಟು ಅಧ್ಯಯನ ಮಾಡಲು ಇಚ್ಛಿಸಿದ್ದೇನೆ.

ಮಲೆಮಾದೇಶ್ವರ ಕಾವ್ಯದಲ್ಲಿ ಬರುವ ಸಾಮಾಜಿಕ ಸ್ಥಿತಿಗತಿಗಳು, ಮಾದೇಶ್ವರ ಹುಟ್ಟಿನ ಇತಿಹಾಸ ಹಾಗೂ ಕಂಸಾಳೆಯವರು ಹೇಳುವ ಕಥೆಗಳು, ಮಾದೇಶ್ವರನ ಬಗ್ಗೆ ಇರುವ ನಂಬಿಕೆಗಳು, ಆತನ ಪವಾಡಗಳು ಹಾಗೂ ಅಲ್ಲಿ ಬರುವ ಕೌಟುಂಬಿಕ ವಿಚಾರಗಳನ್ನು ಅಧ್ಯಯನ ಮಾಡುವುದು ಮತ್ತು ತಿಳಿಸುವುದಾಗಿದೆ.

ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ಮಂಟೇಸ್ವಾಮಿಯ ಹುಟ್ಟಿನ ಬಗ್ಗೆ, ಆ ಕಾವ್ಯದಲ್ಲಿ ಬರುವ ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳು, ನೀಲಗಾರರು ಮತ್ತು ಆಚರಣೆಗಳು, ಮಂಟೇಸ್ವಾಮಿಯ ಬಗ್ಗೆ ಇರುವ ನಂಬಿಕೆ, ಸಂಪ್ರದಾಯಗಳು, ಆಚಾರ–ವಿಚಾರಗಳು ಹಾಗೂ ಮಂಟೇಸ್ವಾಮಿ ಮೆರೆದ ಪವಾಡಗಳು ಇವುಗಳ ಬಗ್ಗೆ ಅಧ್ಯಯನ ಮಾಡಿ ತಿಳಿಸುವ ಉದ್ದೇಶವಾಗಿದೆ.

ಕಾಡುಗೊಲ್ಲರ ಸಂಸ್ಕೃತಿಗೆ ಸಂಬಂಧಿಸಿದ ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪನ ಹುಟ್ಟು ಹಾಗೂ ಕೌಟುಂಬಿಕ ವಿಚಾರಗಳು, ಗಣಿಯವರ ವಿಚಾರಗಳು, ಅಲ್ಲಿರುವ ಆಚರಣೆಗಳು, ನಂಬಿಕೆಗಳು ಮತ್ತು ಪವಾಡಗಳ ಬಗ್ಗೆ ತಿಳಿಸಿಕೊಡಲು ಈ ಅಧ್ಯಯನದ ಉದ್ದೇಶವಾಗಿದೆ. ಸಿತ್ತಯ್ಯ, ಕಾಟುಮುಲಿಂಗರ ಹುಟ್ಟು, ಗೊಲ್ಲರ ಕುಲದ ಹುಟ್ಟು, ಜುಂಜಪ್ಪನ ಹುಟ್ಟು, ಮಾರಕ್ಕನ ಮದುವೆ, ಆಚರಣೆಗಳು, ನಂಬಿಕೆಗಳು ಮತ್ತು ಅವರ ಕುಟುಂಬಗಳ ಹಿನ್ನೆಲೆಯನ್ನು ತಿಳಿಯುವುದಾಗಿದೆ.

ಪಿ.ಕೆ.ರಾಜಶೇಖರರವರು ಸಂಪಾದಿಸಿರುವ ವೀರಕಾವ್ಯವಾದ 'ಪಿರಿಯಾಪಟ್ಟಣ ಕಾಳಗ' ಕಾವ್ಯದಲ್ಲಿ ವೀರರಾಜನ ಕೌಟುಂಬಿಕ ವಿಚಾರ ಚಾಮಾಯಿಯ ಪಾತ್ರ, ಹಂಪಟ್ಟಿಗೌಡನ ಸೊಸೆ ಕೆಂಪಮ್ಮನ ಪಾತ್ರ, ಇದರಲ್ಲಿ ಬರುವ ನಾಡಿನ ಪ್ರೇಮದ ಕಥೆ,

ಚಾಮುಂಡಿಯ ರೋಷ, ದ್ವೇಷ ಅಸೂಯೆ, ಉತ್ತನಳ್ಳಿ ಮಾರಮ್ಮ ಅಕ್ಕನಿಗೆ ತಕ್ಕತಂಗಿಯಾಗಿರುವುದು, ವೀರರಾಜನ ಕಾಮಪ್ರೇಮಗಳ ನಡುವೆ ನಡೆಯುವ ಸಂಘರ್ಷ, ವೀರರಾಜನ ಅಂತಿಮಕಾಲದ ಬಗ್ಗೆ ವಿವರವಾಗಿ ತಿಳಿಯುವುದು.

ಮತ್ತೊಂದು ಜನಪದ ಕಾವ್ಯವಾದ 'ಚಿಕ್ಕದಣ್ಣಾಯಕ ಚೆನ್ನಬಸವಣ್ಣ' ಎಂಬ ಜನಪದ ಕಾವ್ಯವನ್ನು ಸಂಪಾದಿಸಿರುವ ಶ್ರೀಯುತ ಮಲೆಯೂರು ಗುರುಸ್ವಾಮಿ ಮತ್ತು ದೇವಯ್ಯ ಹರವೆ ಇವರ ಈ ಜನಪದ ಕಾವ್ಯದಲ್ಲಿ ಕಂಡುಬರುವ ಚೆನ್ನಬಸವಣ್ಣ ಹುಟ್ಟಿನ ಕಥೆ, ಈ ಕಾವ್ಯದಲ್ಲಿ ಬರುವ ನಂಬಿಕೆಗಳು, ಪವಾಡಗಳ ಬಗ್ಗೆ ಹಾಗೂ ಜನಪದ ವಕ್ತಾರರು ಹೇಳುವ ಕಥೆಗಳನ್ನು ಹಾಗೂ ಈ ಕಾವ್ಯದಲ್ಲಿ ಬರುವ ಕೌಟುಂಬಿಕ ವಿಚಾರಗಳನ್ನು ಹೊರತೆಗೆದು ಅಧ್ಯಯನ ಮಾಡಿ ತಿಳಿಸುವುದಾಗಿದೆ.

ಹೀಗೆ ಮೇಲಿನ ೫ ಜನಪದ ಕಾವ್ಯಗಳನ್ನು ನನ್ನ ಈ ನಿಬಂಧಕ್ಕೆ ಆಯ್ಕೆಮಾಡಿ–ಕೊಂಡಿದ್ದು ನನ್ನ ಅನುಭವಕ್ಕೆ ಬರುವ ವಿಷಯಗಳನ್ನು ಆದಷ್ಟೂ ತಕ್ಕಮಟ್ಟಿಗೆ ಸಮಗ್ರವಾಗಿ ತಿಳಿಸಲು ಪ್ರಯತ್ನಿಸುತ್ತಿದ್ದೇನೆ. ಎಲ್ಲಾ ಸಹೃದಯ ಬಂದುಗಳು ಈ ಕಾವ್ಯಗಳಲ್ಲಿ ಬರುವ ಕೌಟುಂಬಿಕ ವಿಚಾರದ ಬಗ್ಗೆ ಸಾಕಷ್ಟು ವಿಚಾರಗಳಿವೆ. ಅವುಗಳನ್ನು ಪೂರ್ಣವಾಗಿ ತಿಳಿಸಲು ಕಾಲಾವಕಾಶಗಳು ಮುಂದೊಂದು ದಿನ ಒದಗಿಬರಬಹುದು. ಈ ನಿಬಂಧಕ್ಕೆ ಎಷ್ಟು ಬೇಕು ಅಷ್ಟು ಮಾತ್ರ ನಾನು ತಿಳಿಸಲು ಸತತ ಪ್ರಯತ್ನಪಟ್ಟಿರುತ್ತೇನೆ. ಈ ನನ್ನ ವಿಚಾರಗಳಲ್ಲಿ ಏನಾದರೂ ದೋಷಗಳು ಕಂಡುಬಂದಲ್ಲಿ ನಮ್ಮ ತಪ್ಪುಗಳನ್ನು ಮನ್ನಿಸಬೇಕೆಂದು ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ.

# ಅಧ್ಯಾಯ – ೨

# ಜನಪದ ಕಾವ್ಯಗಳ ಹಿನ್ನೆಲೆ ಮತ್ತು ಪ್ರಭಾವ

## ಜನಪದ

ಜನಪದ ಮತ್ತು ಜಾನಪದ ಈ ಪದಗಳ ಅರ್ಥವನ್ನು ಮೊದಲು ವಿಚಾರ ಮಾಡುವುದು ಸೂಕ್ತ. ಈ ಪದಗಳು ಸಾಹಿತ್ಯ ಎಂಬ ಪದದೊಡನೆಯೇ ಬಳಕೆ ಮಾಡುತ್ತಿದ್ದೇವೆ. ಈ ಪದಗಳಿಗೆ ಆಂಗ್ಲಭಾಷೆಯಲ್ಲಿ 'Folk Literature' ಎಂದು ಪರ್ಯಾಯವಾಗಿ ಬಳಸುತ್ತೇವೆ. 'Folklore' ಎಂಬುದಕ್ಕೆ ನಾವು ಯಾವ ಬದಲಿ ಪದವನ್ನು ಬಳಸುತ್ತಿಲ್ಲ.

"ಜನಪದ ಎಂದರೆ ಆಪ್ಟೆಯವರ ಅರ್ಥಕೋಶದ ಪ್ರಕಾರ, a community, race, nation, a kingdom, an empire, an inhabited country ಮೊದಲಾದ ಅರ್ಥಗಳನ್ನು ಬಳಸುತ್ತೇವೆ."[೧] "ಜಾನಪದ ಎಂದರೆ an inhabitant of the country, a rustic boor, peasant, a country ಎಂಬುದಾಗಿ ಅರ್ಥಗಳನ್ನು ತಿಳಿಸಿದ್ದಾರೆ".[೨]

"ಇಂಗ್ಲಿಷ್‌ನಲ್ಲಿ 'Folk - ಕೂಡ ಒಂದು ಜನಾಂಗ, ಸಮಾಜದ ಕೆಳಗಿನಸ್ತರ (ಸಂಕೀರ್ಣ ಸ್ವಭಾವದ ನಾಗರಿಕ ಸಮಾಜದಲ್ಲಿ ಹಳೆಯಗುಂಪು), ಮೂಲ ಸಂಸ್ಕೃತಿಯನ್ನು ಒಯ್ಯುವ ಸಾಮಾಜಿಕವರ್ಗ, ಸಂಪ್ರದಾಯದೊಂದಿಗೆ ಎಣೆದ ಸಮಾಜ ಮೊದಲಾದ ಅರ್ಥಗಳನ್ನು ಕೊಡುತ್ತದೆ".[೩] ಈ ವಿಚಾರಗಳನ್ನು ಗಮನಿಸಿದಾಗ Folklore ಎನ್ನುವುದು ಸಾಹಿತ್ಯಕ್ಕೆ ವಿರುದ್ಧವಾದುದು ನಮ್ಮ 'ಜನಪದ' ಪರಿಕಲ್ಪನೆ ಪ್ರಾಚೀನವಾದುದು. ಈ Folklore ಎನ್ನುವುದು Folk literatureನಿಂದ ಬೇರೆಯಾದುದು. ಈ Folk ಪದ ಜನಪದಕ್ಕೆ ಸಂವಾದಿಯಾದುದು. "Folklore ಎನ್ನುವುದು ಒಂದು ಜನತೆಯ ಗ್ರಂಥಸ್ಥವಲ್ಲದ ಸಂಪ್ರದಾಯದ ಮೊತ್ತ ಹಾಗೂ ಅದನ್ನು ಕುರಿತ ವಿಜ್ಞಾನ ಇದನ್ನೇ ಇನ್ನೊಂದು ಮಾತಿನಲ್ಲಿ ಹೇಳುವುದಾದರೆ Folklore ಎನ್ನುವುದು ಸಂಪ್ರದಾಯವನ್ನು ಕುರಿತ ವಿಜ್ಞಾನ"[೪] "Folk literature ಎನ್ನುವುದನ್ನು ಮೊಟ್ಟಮೊದಲು ಬಳಸಿದವರು. ೧೯೩೧ರಲ್ಲಿ ಪ್ರಕಟವಾದ 'ಗರತಿಯ ಹಾಡು' ಸಂಕಲನಕ್ಕೆ ಮುನ್ನುಡಿಯನ್ನು ಬರೆದ ದಿವಂಗತ ಬಿ.ಎಂ.ಶ್ರೀ ಮತ್ತು ದ.ರಾ.ಬೇಂದ್ರೆ–

---

೧. ಜಾನಪದ ತತ್ವಗಳು (ಸಂ.), ಅರವಿಂದ ಮಾಲಗತ್ತಿ, ಪುಟ ೧.

೨. ಅದೇ ಗ್ರಂಥ, ಪುಟ ೧.

೩. ಅದೇ ಗ್ರಂಥ, ಪುಟ ೧.

೪. ಹಾ.ಮಾ.ನಾಯಕ, ಲೇಖನ, ಪುಟ ೨.

ಯವರು ಈ ಮಾತನ್ನು ಬಳಸಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಲೇಖಕರೆಲ್ಲ ಜಾನಪದ ಸಾಹಿತ್ಯ ಎಂದೇ ಬಳಸುತ್ತಿದ್ದಾರೆ. ಜಾನಪದ ಮತ್ತು ಜನಪದ ಈ ಪದಗಳ ನಡುವೆ ಯಾವುದೇ ವ್ಯತ್ಯಾಸವಿಲ್ಲದೆ ಬಳಸುತ್ತಿದ್ದಾರೆ."[೧]

ಈಗ ಇತ್ತೀಚೆಗೆ ಶಾಸ್ತ್ರೀಯ ಅಧ್ಯಯನದ ವಿಷಯವಾಗಿರುವುದರಿಂದ ಬಹಳ ಎಚ್ಚರಿಕೆಯಿಂದ ಬಳಸಬೇಕಾಗಿದೆ. ಕಾರಣವೇನೆಂದರೆ 'Folk' ಎನ್ನುವುದಕ್ಕೆ 'ಜನಪದ' ಎಂದು ಬಳಸುತ್ತೇವೆ. ಹಾಗೆಯೇ 'Folklore' ಪದಕ್ಕೆ 'ಜಾನಪದ' ಎನ್ನುವ ಅರ್ಥದಲ್ಲಿ ಬಳಸಬಹುದಾಗಿದೆ. 'Folk literatureಗೆ ಸಂವಾದಿಯಾಗಿ ಪಾರಿಭಾಷಿಕ ಪದವೊಂದನ್ನು ಕಂಡುಕೊಳ್ಳುವಷ್ಟು ಭಾಷಾವಿಜ್ಞಾನಿಗಳು ಅಧ್ಯಯನ ನಡೆಸಿದ್ದಾರೆ. ಅವರಲ್ಲಿ ಪ್ರಮುಖರಾದ ಡಾ. ಸುನೀತಕುಮಾರ್ ಚಟರ್ಜಿ 'ಲೋಕಾಯನ' ಎಂಬ ಪದವನ್ನು ಬಳಸಿದ್ದಾರೆ. ಆದರೆ ಅದು ಬಳಕೆಯಾಗುತ್ತಿಲ್ಲ. Folklore ಎಂಬ ಪದಕ್ಕೆ ಅರ್ಥ ಸಂವಾದಿಯಾಗಿ ಜಾನಪದ ಮತ್ತು Folk ಎಂಬುದಕ್ಕೆ ಜನಪದ ಅರ್ಥವನ್ನು ಮೂಲಶಕ್ತಿಯಾಗಿ ಇಂದು ಬಳಸುತ್ತೇವೆ.

ಹೀಗೆ ಜನಪದ ಮತ್ತು ಜಾನಪದ ಪದಗಳನ್ನು ಲೋಕರೂಢಿಯಾಗಿ ನಾವು ಬಳಕೆಗೆ ತಂದಿದ್ದು ಇದರ ಅಧ್ಯಯನ ಇಂದು ವಿಶಾಲವ್ಯಾಪ್ತಿಯನ್ನು ಒಳಗೊಂಡಿದೆ. ಈ ಕಾರಣದಿಂದ ಜನಪದ ಸಾಹಿತ್ಯದಲ್ಲಿ ಬರುವ ಮಹಾಕಾವ್ಯಗಳ ಅಧ್ಯಯನ ಇತ್ತೀಚಿನ ದಶಕಗಳಿಂದ ಹೆಚ್ಚು ಹೆಚ್ಚು ಸಂಶೋಧನೆಗೆ ಒಳಪಡುತ್ತಿದೆ.

## ಜಗತ್ತಿನ ಜನಪದ ಮಹಾಕಾವ್ಯಗಳ ಅಧ್ಯಯನದ ಹಿನ್ನೆಲೆ ಮತ್ತು ಪ್ರಭಾವ

ಜನಪದ ಕಾವ್ಯಗಳ ಬಗ್ಗೆ ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧ-ದಿಂದಲೇ ಯುರೋಪಿನ ದೇಶಗಳಲ್ಲಿ ಆಸಕ್ತಿ ಮೂಡಿತ್ತು. ತಮ್ಮ ತಮ್ಮ ದೇಶಗಳಲ್ಲಿ ಮಹಾಕಾವ್ಯಗಳ ಸಂಗ್ರಹ ಹಾಗೂ ಸಂಪಾದನೆಯ ಕಾರ್ಯದಲ್ಲಿ ಅನೇಕ ವಿದ್ವಾಂಸರು ತೊಡಗಿದ್ದರು. ಮೊದಲಿಗೆ ಪ್ರಾರಂಭಿಸಿದ್ದು ತಮ್ಮ ದೇಶದ ಸಂಸ್ಕೃತಿಯನ್ನು ಪ್ರತಿಬಿಂಬಿಸಲು ಫಿನ್‌ಲ್ಯಾಂಡಿನ 'ಲೋನ್‌ರಾಟ್ ಎಲಿಯಾಸ್' ಎಂಬ ವಿದ್ವಾಂಸನು ವೃತ್ತಿಯಲ್ಲಿ ವೈದ್ಯನಾಗಿದ್ದರೂ ಸಹ ಸಾಹಿತ್ಯಕ್ಕೆ ಹೆಚ್ಚಿನ ಮನ್ನಣೆಯನ್ನು ನೀಡಿ ಫಿನ್‌ಲೆಂಡ್‌ನ ಕೆಲವು ಕಥನಗೀತೆಗಳನ್ನು ಸಂಗ್ರಹಿಸಲು ಪ್ರಾರಂಭಿಸಿದನು. ಹೀಗೆ ಆತನು ತನ್ನ ಪ್ರವೃತ್ತಿಯನ್ನು ಬೆಳೆಸಿಕೊಂಡು ಸಂಗ್ರಹಕಾರ್ಯದಲ್ಲಿ ತೊಡಗಿದ. ಈತನಿಗೆ ಮೊದಲು ಕಲೆವಾಲ, ವೆನ್ನಾಮೊಯಿನಿನ್, ಇಲ್‌ಮೇರಿನನ್ ಎಂಬ ೩

೧. ಜಾನಪದ ತತ್ವಗಳು (ಸಂ.), ಡಾ. ಅರವಿಂದ ಮಾಲಗತ್ತಿ, ಪುಟ ೨ ಮತ್ತು ೩.

ಸಾಂಸ್ಕೃತಿಕ ವೀರರ ಹಾಗೂ ಲೌಹಿ ಎಂಬ ಸ್ತ್ರೀ ಪಾತ್ರಕ್ಕೆ ಸಂಬಂಧಿಸಿದ ಕಥನಗೀತೆಗಳು ಲಭ್ಯವಾದವು.

ಈತನು ಈ ೪ ವ್ಯಕ್ತಿಗಳ ಕಥನಗೀತೆಗಳನ್ನು ಒಂದು ವ್ಯವಸ್ಥಿತವಾಗಿ ಜೋಡಿಸಿ, ಒಂದಕ್ಕೊಂದು ಸಂಬಂಧಗಳನ್ನು ಕಲ್ಪಿಸಿ ಇದಕ್ಕೆ ಮಹಾಕಾವ್ಯದ ಸ್ವರೂಪವನ್ನು ನೀಡಿದನು. ಇದನ್ನು ಮನಗಂಡ 'ಲೋನ್‌ರಾಟ್ ಎಲಿಯಾಸ್' ಇದಕ್ಕೆ 'ಕಲೇವಾಲ' ಎಂಬ ಹೆಸರನ್ನು ನೀಡಿ, ಸಂಪಾದಿಸಿ ೧೮೩೫ರಲ್ಲಿ ಪ್ರಕಟಣೆಯನ್ನು ಮಾಡಿದನು. ಇದು ಫಿನ್‌ಲ್ಯಾಂಡಿನ್ ಜನಪದ ಅಧ್ಯಯನದ ಇತಿಹಾಸದಲ್ಲಿ ಮೊದಲ ಮಹತ್ವಪೂರ್ಣ ಘಟನೆ ಎನ್ನುವಂತೆ ಮಾಡಿದನು. ಇದು ಅಲ್ಲಿನ ಜನತೆಗೂ ಕೂಡ ಮಹತ್ವಪೂರ್ಣ-ವಾದುದು ಎಂಬ ಅರಿವು ಮೂಡಿ, ನಮ್ಮ ಸಂಸ್ಕೃತಿ, ನಮ್ಮ ದೇಶ ಎಂಬ ಆತ್ಮವಿಶ್ವಾಸವನ್ನು ಮೂಡಿಸಿಕೊಂಡು, ರಾಷ್ಟ್ರಾಭಿಮಾನವನ್ನು ಹೊಂದಿ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಲು ಮತ್ತು ರಷ್ಯಾದ ಹಿಡಿತದಿಂದ ಬಿಡಿಸಿಕೊಳ್ಳಲು ನೆರವಾಯಿತು. ಈ ಕಾವ್ಯವನ್ನು ಇಂದಿಗೂ ಕೂಡ ಮಹತ್ವಪೂರ್ಣವಾದ ಮಹಾಕಾವ್ಯ ಎಂದು ಫಿನ್‌ಲ್ಯಾಂಡಿನ ಜನರು ಭಾವಿಸಿದ್ದಾರೆ."[೧]

ಈ ಜನಪದ ಮಹಾಕಾವ್ಯವನ್ನು ಹಾಡುವಾಗ ಬಳಸುತ್ತಿದ್ದ ವಾದ್ಯ 'ಕಂತಲೆ' ಎಂಬುದು ಫಿನ್‌ಲ್ಯಾಂಡಿನ ಸಾಹಿತ್ಯ ಸಂಗೀತಕಲೆಗಳ ಮೇಲೆ ದಟ್ಟವಾದ ಪ್ರಭಾವವನ್ನು ಬೀರಿತು. ಫಿನ್‌ಲ್ಯಾಂಡಿನ ಜನಪದ ವಿದ್ವಾಂಸರು ರೂಪಿಸಿದ ಜಾನಪದ ಅಧ್ಯಯನವು ಐತಿಹಾಸಿಕ ಮತ್ತು ಭೌಗೋಳಿಕ ಹಿನ್ನೆಲೆಯಿಂದ ಪ್ರಮುಖ ಕೊಡುಗೆಯಾಗಿದೆ. ಲೋನ್‌ರಾಟ್ ಎಲಿಯಾಸ್, ಕಾರ್ಲೆಕ್ರಾನ್ ಮೊದಲಾದವರಿಗೆ ಈ ಕಲೇವಾಲ ಕಾವ್ಯ ಪ್ರೇರಣೆಯಾಯಿತು ಎಂದು ಹೇಳಬಹುದಾಗಿದೆ. ಈ ಪ್ರಯೋಗದಿಂದ ಅಥವಾ ಪ್ರಭಾವಕ್ಕೆ ಒಳಗಾದ ಯುರೋಪಿನ ಮತ್ತು ಜಗತ್ತಿನ ಇತರ ದೇಶಗಳ ಜಾನಪದ ವಿದ್ವಾಂಸರು ತಮ್ಮ ತಮ್ಮ ಜಾನಪದ ಕ್ಷೇತ್ರದಲ್ಲಿ ಇಂತಹ ಮಹಾಕಾವ್ಯಗಳು ಇವೆ ಎಂಬುದನ್ನು ಮನಗಂಡು ಹುಡುಕಲು ಪ್ರಾರಂಭಿಸಿದರು.

ಗ್ರಾಮೀಣ ಜನಪದ ಸಂಸ್ಕೃತಿ ಕೈಗಾರಿಕೀಕರಣದಿಂದ ನಾಶವಾಗುತ್ತಿದ್ದದ್ದನ್ನು ಗಮನಿಸಿ ಉಳಿಸಿ ಬೆಳೆಸುವ ಮತ್ತು ಸಂಗ್ರಹಿಸುವ ಕಾರ್ಯಕ್ಕೆ ತೊಡಗಿದರು. ಹೀಗೆ ಸಂಗ್ರಹಕಾರ್ಯ ಪ್ರಾರಂಭಗೊಂಡು ಜಗತ್ತಿನ ಇತರ ದೇಶಗಳಾದ ಆಫ್ರಿಕಾ, ಲ್ಯಾಟಿನ್ ಅಮೇರಿಕಾ, ಏಷ್ಯಾದ ದೇಶಗಳಲ್ಲಿರುವ ವಿದ್ವಾಂಸರು ಜನಪದ ಮಹಾಕಾವ್ಯದ ಅಧ್ಯಯನ ಮಹತ್ವಪೂರ್ಣವಾದುದು ಎಂದು ಭಾವಿಸಿದರು.

---

೧. ಜನಪದ ಮಹಾಕಾವ್ಯ – ಡಾ. ತೀ.ನಂ.ಶಂಕರನಾರಾಯಣ, ಪುಟ – ೧೬.

೧೯ನೆಯ ಶತಮಾನದಲ್ಲಿ ಲೋನ್‌ರಾಟ್ ಎಲಿಯಾಸ್, ಜೂಲಿಯಸ್ ಕಾರ್ನ್ ಮತ್ತು ಕಾರ್ಲೆಕ್ರಾನ್ ಇವರು ಹೆಚ್ಚಿನ ಆಸಕ್ತಿಯನ್ನು ವಹಿಸಿದರು. ನಂತರ ಪ್ರೊ. ಲೌರಿ ಹೋಂಕೊ ಎಂಬ ವಿದ್ವಾಂಸ ಅಂತರರಾಷ್ಟ್ರೀಯ ಮಟ್ಟದಲ್ಲಿ ಜನಪದ ಮಹಾಕಾವ್ಯಗಳ ಅಧ್ಯಯನಕ್ಕೆ ಮಹತ್ವ ನೀಡಿದನು. ನಂತರ ಜನಪದ ಮಹಾಕಾವ್ಯಗಳ ಅಧ್ಯಯನಕ್ಕೆ ಸ್ಫೂರ್ತಿ ಹಾಗೂ ಪ್ರೇರಣೆಯನ್ನು 'ಯುನೆಸ್ಕೋ' ಸಂಸ್ಥೆ ಜಾನಪದ ಮಹಾಕಾವ್ಯಗಳ ಅಧ್ಯಯನಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದೆ. ಆರ್ಥಿಕ ನೆರವನ್ನು ನೀಡಿ ಶಿಷ್ಟ ಸಂಸ್ಕೃತಿಯ ರಕ್ಷಣೆಯನ್ನು ಮಾಡಿ ಜನಪದ ಸಂಸ್ಕೃತಿಯೂ ಉಳಿದಿದೆ ಎಂಬುದರ ಅರಿವನ್ನು ಮೂಡಿಸಿ ಪ್ರೇರಣೆ ಪ್ರಭಾವವನ್ನು ಬೀರಿದೆ. ಯುನೆಸ್ಕೋ ನೆರವು ಪಡೆದು ಪ್ಯಾರಿಸ್‌ನಲ್ಲಿ ಜಗತ್ತಿನ ಎಲ್ಲಾ ಮಹಾಕಾವ್ಯಗಳ ದಾಖಲಾತಿಯನ್ನು ಸಂಗ್ರಹಾಲಯದಲ್ಲಿ ದಾಖಲು ಮಾಡುವ ಪ್ರಯತ್ನ ನಡೆಯುತ್ತಿದೆ. ಫಿನ್‌ಲೆಂಡಿನಲ್ಲಿರುವ 'Folklore Fellows' ಎಂಬ ಒಂದು ಶತಮಾನದಷ್ಟು ದೀರ್ಘವಾದ ಇತಿಹಾಸ ಹೊಂದಿರುವ ಈ ಸಂಸ್ಥೆ ಜಾನಪದ ಕ್ಷೇತ್ರದಲ್ಲಿ ಅಂತಾರಾಷ್ಟ್ರೀಯ ಅಧ್ಯಯನಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದೆ. ಜಗತ್ತಿನ ಜಾನಪದ ವಿದ್ವಾಂಸರು ಒಂದು ಕಡೆ ಸೇರುವ ಅವಕಾಶವನ್ನು ಮಾಡಿ ವಿಚಾರವಿನಿಮಯ ಮಾಡಿಕೊಳ್ಳಲು ಅನುವು ಮಾಡಿಕೊಟ್ಟಿತು. ಇದನ್ನು ೧೯೯೦ರಲ್ಲಿ ಪುನರುಜ್ಜೀವನಗೊಳಿಸಿದವನು ಮತ್ತು ಇದಕ್ಕೆ ಜೀವವನ್ನು ನೀಡಿ ಹೊಸ ರೂಪವನ್ನು ಕೊಟ್ಟವನು ಪ್ರೊ. ಲೌರಿಹೊಂಕೋ. ಈ ಸಂಸ್ಥೆ ೧೯೯೧, ೧೯೯೩, ೧೯೯೫ರಲ್ಲಿ ಅಂತಾರಾಷ್ಟ್ರೀಯ ಜಾನಪದ ಕಮ್ಮಟವನ್ನು ಏರ್ಪಡಿಸಿ, ತರಬೇತಿಯನ್ನು ಜಗತ್ತಿನ ಜಾನಪದ ವಿದ್ವಾಂಸರೆಲ್ಲರಿಗೂ ನೀಡಿತು. ಹೀಗೆ ಹೊಸ ಹೊಸ ಆಯಾಮಗಳು ಜನಪದ ಮಹಾಕಾವ್ಯಗಳ ಅಧ್ಯಯನಕ್ಕೆ ಪ್ರೇರಣೆ ನೀಡಿದವು.

**ಭಾರತೀಯ ಜನಪದ ಮಹಾಕಾವ್ಯಗಳ ಅಧ್ಯಯನ**

ಭಾರತ ಅನೇಕ ಭಾಷೆ, ಜನಾಂಗಗಳು ಮತ್ತು ಅನೇಕ ಧರ್ಮಗಳನ್ನು ಹೊಂದಿದ್ದು ಜಾತಿ ಬುಡಕಟ್ಟುಗಳಿಂದ ಕೂಡಿದ ವೈವಿಧ್ಯಮಯವಾದ ದೇಶವಾಗಿದೆ. ಹಿಂದೂಧರ್ಮ ಪ್ರಧಾನವಾಗಿದ್ದರೂ ಭಾರತದಲ್ಲಿ ಅನೇಕ ಧರ್ಮಗಳು ಕಾಲದಿಂದ ಕಾಲಕ್ಕೆ ಭಾರತೀಯ ಸಂಸ್ಕೃತಿಯನ್ನು ಬಿಟ್ಟುಹೋಗಿವೆ? ಭಾರತದಲ್ಲಿ ರಾಷ್ಟ್ರೀಯ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳು ಕೂಡ ಕಾಲದಿಂದ ಕಾಲಕ್ಕೆ ವಿಕಾಸಹೊಂದಿ, ಈ ಮಹಾಕಾವ್ಯಗಳ ಪ್ರಭಾವ ದೇಶದ ಎಲ್ಲಾ ಭಾಷೆಗಳ ಮೇಲೆ ಪರಿಣಾಮವನ್ನು ಬೀರಿವೆ. ಭಾರತದ ಎಲ್ಲಾ ಪ್ರಮುಖ ಭಾಷೆಗಳಲ್ಲೂ ಕವಿಗಳು ಮಹಾಕಾವ್ಯಗಳನ್ನು ರಚಿಸುತ್ತಾ ಬಂದಿರುವುದು ಕಂಡುಬರುತ್ತದೆ. ಪಂಪನ 'ವಿಕ್ರಮಾರ್ಜುನವಿಜಯ' ಆ ಶತಮಾನದ ತ್ಯಾಗ, ಶೌರ್ಯ, ವೀರಕ್ಕೆ ಬಲಿದಾನಗಳಿಗೆ

ಮತ್ತು ಮೌಲ್ಯಗಳಿಗೆ ಮನ್ನಣೆಯನ್ನು ನೀಡಿದೆ. ನಂತರ ಇದೇ ಕಥೆಯನ್ನು ಕುಮಾರವ್ಯಾಸ ಭಕ್ತಿಪ್ರಧಾನವಾಗಿ ಬಳಸಿಕೊಂಡಿದ್ದಾನೆ. ಜೈನಧರ್ಮದ ಹಿನ್ನೆಲೆಯಲ್ಲಿ 'ಪಂಪರಾಮಾಯಣ'ವನ್ನು ಬರೆದಿದ್ದಾನೆ. ಸರ್ವಧರ್ಮ ಸಮನ್ವಯವಾಗಿ ಕುವೆಂಪು-ರವರು 'ರಾಮಾಯಣದರ್ಶನ'ವಾಗಿ ರಚಿಸಿದ್ದಾರೆ. ಇತರ ಭಾಷೆಗಳಲ್ಲಿ ತುಳಸೀ ರಾಮಾಯಣ, ಕಂಬರಾಮಾಯಣ ಮೊದಲಾದ ಕೃತಿಗಳು ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಹೀಗೆ ಕಾಲದಿಂದ ಕಾಲಕ್ಕೆ ಹೊಸ ಹೊಸ ಆಯಾಮ ಪಡೆದು ಜನಪದರ ಬಾಯಿಂದ ಬಾಯಿಗೆ ಬೆಳೆದು ಜನಪದ ರಾಮಾಯಣ ಮತ್ತು ಜನಪದ ಮಹಾಭಾರತಗಳಾಗಿ ರೂಪುಗೊಂಡಿರುವುದನ್ನು ಕಾಣುತ್ತೇವೆ. "ಭಾರತದಲ್ಲಿ ಸು. ೩೦೦ಕ್ಕೂ ಹೆಚ್ಚು ರಾಮಾಯಣಗಳಿವೆ ಎಂದು ಪ್ರೊ. ಎ.ಕೆ.ರಾಮಾನುಜನ್"[೧] ಹೇಳಿದ್ದಾರೆ. ಹೀಗೆ ಜನಪದ ಮಹಾಕಾವ್ಯಗಳು ಹುಟ್ಟಲು ಪ್ರೇರಣೆಯಾಗಿರಬಹುದು. ಮಹಾಭಾರತದ ದ್ರೌಪದಿ, ಪಾಂಡವರು, ಕೌರವರು, ಭೀಷ್ಮ, ಕರ್ಣ, ಕೃಷ್ಣ ಇವರೆಲ್ಲರೂ ಬೇರೆ ಬೇರೆ ರೂಪದಲ್ಲಿ ಜನಪದರಿಂದ ಜನಪದ ಕಾವ್ಯಗಳಲ್ಲಿ ಬೇರೆಯಾಗಿ ಅಭಿವ್ಯಕ್ತಿಗೊಂಡಿದ್ದಾರೆ.

ಭಾರತದಲ್ಲಿ ಪ್ರತಿಯೊಂದು ಭಾಷೆಯಲ್ಲೂ, ಒಂದೊಂದು ಜಾತಿಯಲ್ಲಿಯೂ ಒಂದೊಂದು ಬುಡಕಟ್ಟಿನಲ್ಲಿಯೂ ಕೂಡ ಒಂದೊಂದು ಜನಪದ ಮಹಾಕಾವ್ಯಗಳು ರೂಪುಗೊಂಡಿವೆ. ಹಾಗೆಯೇ ಇತಿಹಾಸ ಪ್ರಸಿದ್ಧ ಪುರುಷರು ಮತ್ತು ಸ್ತ್ರೀಯರ ಬಗ್ಗೆಯೂ ಮಹಾಕಾವ್ಯ, ಖಂಡಕಾವ್ಯಗಳು ರಚಿತವಾಗಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ ಹರಿಜನರಲ್ಲಿ ಮಲೆಯಮಾದೇಶ್ವರ ಹಾಗೂ ಮಂಟೇಸ್ವಾಮಿ ಕಾವ್ಯಗಳನ್ನು ರಚಿಸಿ ಇವರನ್ನು ಬಲಗೈ ಮತ್ತು ಎಡಗೈನವರು ಎಂಬ ಪ್ರತ್ಯೇಕತೆಯನ್ನು ಮಾಡಿಕೊಂಡಿದ್ದಾರೆ. ಕಾಡುಗೊಲ್ಲ ಸಂಸ್ಕೃತಿಯ ಜುಂಜಪ್ಪನ ಕಾವ್ಯ, ವೈಶ್ಯರ ಕನ್ನಿಕಾ ಪರಮೇಶ್ವರಿ ಇವೆಲ್ಲಾ ಸಾಂಸ್ಕೃತಿಕವಾಗಿ ತಾವು ಕಟ್ಟಿಕೊಂಡಿರುವ ಕಥೆಗಳಾಗಿವೆ. ಅವು ಜನಪದರಿಂದ ಹೊಸ ಆಯಾಮ ಪಡೆದು ಮಹಾಕಾವ್ಯಗಳಾಗಲು ಪ್ರೇರಣೆಯಾಗಿವೆ.

ಭಾರತದ ಹಲವು ಕಡೆಗಳಲ್ಲಿ ಪಾಬೂಜಿ, ಅಲ್ಹಾ, ಗೂಗಾ, ದೋಲಾ, ದೇವನಾರಾಯಣ, ಚಾಂದೇನಿ, ಅಣ್ಣನ್ಮಾರ್ ಮೊದಲಾದ ಮಹಾಕಾವ್ಯಗಳು ರಚಿತಗೊಂಡಿವೆ. ಇದೇ ದೃಷ್ಟಿಕೋನದಿಂದ ವಿಚಾರಮಾಡಿ ನೋಡಿದರೆ ಭಾರತದಲ್ಲಿ ವಿವಿಧ ಭಾಷೆ, ಮತ, ಧರ್ಮ, ಜಾತಿ, ಬುಡಕಟ್ಟುಗಳ ಕಾರಣದಿಂದ ಭಾರತವು ವೈವಿಧ್ಯಮಯವಾದ ಮತ್ತು ಸಮೃದ್ಧಿಯಾದ ಸಾಹಿತ್ಯ ಸೃಷ್ಟಿಯಾಗಿರುವುದನ್ನು ಕಾಣುತ್ತೇವೆ.

---

೧. ಜನಪದ ಮಹಾಕಾವ್ಯ – ಡಾ. ತೀ.ನಂ.ಶಂಕರನಾರಾಯಣ, ಪುಟ – ೨೦.

ಭಾರತವು ಸಂಸ್ಕೃತಿಯಲ್ಲಿ ಎಲ್ಲಾ ರಾಷ್ಟ್ರಗಳಿಗಿಂತಲೂ ಮುಂದಿದೆ. ಇಲ್ಲಿ ಜನಪದ ಮಹಾಕಾವ್ಯಗಳು ಜೀವಂತರೂಪದಲ್ಲಿ, ಆದರೆ ಯುರೋಪ್ ಮತ್ತು ಅಮೇರಿಕಾ ದೇಶಗಳಲ್ಲಿ ಜನಪದ ಮಹಾಕಾವ್ಯಗಳು ಜೀವಂತವಾಗಿಲ್ಲ. ಯಾವುದೋ ಕಾಲದಲ್ಲಿ ಕೈಬರಹದಲ್ಲಿ ಬರೆದುಕೊಂಡ ರೂಪದಲ್ಲಿವೆ. ಆ ಸಾಮಾಗ್ರಿಯ ಆಧಾರದ ಮೇಲೆ ಅಲ್ಲಿನ ಜಾನಪದ ವಿದ್ವಾಂಸರು ಅಧ್ಯಯನ ನಡೆಸುತ್ತಾರೆ. ಆದರೆ ಜನಪದ ಮಹಾಕಾವ್ಯಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಹೇಗೆ ಹಾಡುತ್ತಾರೆ? ಹೇಗೆ ಅಭಿನಯಿಸುತ್ತಾರೆ? ಹಾಡುಗಾರನಿಂದ ಹಾಡುಗಾರನಿಗೆ, ಹಾಡುಗಾರ್ತಿಯಿಂದ ಹಾಡುಗಾರ್ತಿಗೆ, ಸಂದರ್ಭದಿಂದ ಸಂದರ್ಭಕ್ಕೆ, ಪ್ರೇಕ್ಷಕರಿಂದ ಪ್ರೇಕ್ಷಕರಿಗೆ ಹೇಗೆ ಬದಲಾಗುತ್ತದೆ? ಎಂಬುದನ್ನು ಅಭ್ಯಾಸಮಾಡಲು ಸಾಧ್ಯವಿಲ್ಲ. ಈವತ್ತು ಕೂಡ ಪಾಶ್ಚಾತ್ಯದೇಶಗಳು ಭಾರತದ ಜನಪದ ಮಹಾಕಾವ್ಯಗಳ ಸಂಗ್ರಹ ಕಾರ್ಯದಲ್ಲಿ ಸಂಪಾದನೆಯ ಬಗ್ಗೆ ಮತ್ತು ಸಂಶೋಧನೆಗಳನ್ನು ನಡೆಸುವಲ್ಲಿ ಹೆಚ್ಚು ಆಸಕ್ತಿಯನ್ನು ತೋರಿಸಿವೆ. ಇದೇ ಮುಖ್ಯವಾದ ಕಾರಣವೂ ಕೂಡ ಆಗಿದೆ. ಮೊದಲು ಭಾರತದಲ್ಲಿ ರಾಷ್ಟ್ರೀಯ ಮಹಾಕಾವ್ಯಗಳು ಇತರ ದೇಶದ ಜನರಿಗೆ ತಿಳಿದಿದ್ದವೆ ಹೊರತು ಜನಪದ ಕಾವ್ಯಗಳ ಬಗ್ಗೆ ಯಾರಲ್ಲೂ ಕಲ್ಪನೆಗಳೂ ಇರಲಿಲ್ಲ. "೧೯೬೦ರವರೆಗೆ ವಿದೇಶಿ ವಿದ್ವಾಂಸರಿಗೆ ಕಲೇಲಿಯಾ, ಉತ್ತರ ಏಶಿಯಾ, ಮಧ್ಯ ಏಷಿಯಾ ಮತ್ತು ಬಾಲ್ಕನ್ ದೇಶಗಳಲ್ಲಿ ಜನಪದ ಮಹಾಕಾವ್ಯಗಳಿವೆ ಎಂಬುದಷ್ಟೇ ತಿಳಿದಿತ್ತು. ಆದರೆ ಈ ದೇಶಗಳು ನಡೆಸಿದ ಸಂಶೋಧನೆಗಳಿಂದ ದಕ್ಷಿಣ ಏಷ್ಯಾ, ಆಗ್ನೇಯ ಏಷ್ಯಾ, ಮಧ್ಯಪೂರ್ವ ದೇಶಗಳು, ಆಫ್ರಿಕಾ ಮೊದಲಾದ ದೇಶಗಳಲ್ಲಿ ಜನಪದ ಮಹಾಕಾವ್ಯ-ಗಳಿವೆ ಎಂದು ತಿಳುವಳಿಕೆ ಬಂದ ನಂತರ ಭಾರತದಲ್ಲಿ ಕಾರ್ಯನಿರ್ವಹಿಸಿದ ವಿದ್ವಾಂಸರು ಮತ್ತು ಆಡಳಿತಗಾರರು ಕೆಲವು ಜನಪದ ಕಾವ್ಯಗಳನ್ನು ೧೯ನೇ ಶತಮಾನದಲ್ಲಿ ಉಲ್ಲೇಖಿಸಿದ್ದಾರೆ.[೧] ಯಾವುದೇ ದೇಶದ ಸಂಸ್ಕೃತಿಯನ್ನು ತಿಳಿಯದೆ ಆ ದೇಶದ ಸಂಸ್ಕೃತಿ ಮತ್ತು ಜಾನಪದವನ್ನು ತಿಳಿಯಲು ಸಾಧ್ಯವಿಲ್ಲ. ಜರ್ಮನಿಯ ಇಂಡಾಲಜಿಸ್ಟ್ ಪ್ರೊ. ಸಾಂಥೆಮರ್ ಇವರು ಸು. ೨ ದಶಕಗಳಿಗೂ ಹೆಚ್ಚಿನ ಕಾಲದಲ್ಲಿ ಮಹಾರಾಷ್ಟ್ರದಲ್ಲಿ ಸಂಶೋಧನೆ ನಡೆಸಿ ಪಶ್ಚಿಂ ಭಾರತದ ಜನಪದ ಪಶುಪಾಲನಾ ದೇವತೆಗಳಾದಂತಹ ಬಿರೋಬ, ಖಂಡೋಬಾ, ಮಾಸೋಬಾ ಇವುಗಳ ಬಗ್ಗೆ ಬರೆದಿರುವ Postoral Deities in Western India ಎಂಬ ಕೃತಿ ಹಿಂದೂಧರ್ಮವನ್ನು ಹೊಸ ದೃಷ್ಟಿಯಿಂದ ನೋಡಲು ಅವಕಾಶ ಕಲ್ಪಿಸಿಕೊಟ್ಟಿದೆ.

---

೧. ಕರ್ನಾಟಕ ಜನಪದ ಮಹಾಕಾವ್ಯಗಳು - ಲೇಖನ ಜನಪದ ರಾಮಾಯಣ ಮತ್ತು ಮಹಾಭಾರತ, ಡಾ. ಪಿ.ಕೆ.ರಾಜಶೇಖರ, ಸಂ. ಡಾ. ತೀ.ನಂ.ಶಂಕರನಾರಾಯಣ.

ಭಾರತದ ಜನಪದ ಮಹಾಕಾವ್ಯಗಳ ಬಗ್ಗೆ ೧೯೭೦ರಿಂದಲೂ ಅಮೇರಿಕನ್ ಜಾನಪದ ವಿದ್ವಾಂಸರು ಅಭ್ಯಾಸಮಾಡಿದ್ದಾರೆ. ಬ್ರೆಂಡಾಬೆಕ್ ಎಂಬ ಮಹಿಳೆ ತಮಿಳುನಾಡಿನ ಅಣ್ಣನ್ಮಾರ್ ಕಥೆ ಬಗ್ಗೆ ಅಧ್ಯಯನ ಮಾಡಿ 'The three Twins' ಎಂಬ ಗ್ರಂಥವನ್ನು ೧೯೮೨ರಲ್ಲಿ ಪ್ರಕಟಿಸಿದ್ದಾರೆ. ವಿಸ್ಕಾನ್ಸಿನ್ ವಿಶ್ವವಿದ್ಯಾನಿಲಯದಲ್ಲಿ ತೆಲಗು ಪ್ರಾಧ್ಯಾಪಕರಾಗಿರುವ ಪ್ರೊ. ವಿ.ನಾರಾಯಣರಾವ್ ಅವರ ಮಾರ್ಗದರ್ಶನದಲ್ಲಿ ಜಿನೇ ರೋಗೇರ್ ಎಂಬ ಅಮೆರಿಕನ್ ವಿದ್ವಾಂಸ 'ಪಾಲ್ನಾಡು ವೀರಚರಿತ್ರಂ' ಎಂಬ ಮಹಾಕಾವ್ಯದ ಬಗ್ಗೆ ಪಿಎಚ್.ಡಿ. ಪದವಿ ಪಡೆದಿದ್ದಾರೆ.[೧]

ಇದಾದ ನಂತರ ಭಾರತ ಮತ್ತು ಅಮೇರಿಕಾದ ಜಾನಪದ ವಿದ್ವಾಂಸರು ವಿಸ್ಕಾನ್ಸಿನ್ ವಿಶ್ವವಿದ್ಯಾಲಯದಲ್ಲಿ ೧೯೮೨ರಲ್ಲಿ 'Oral Epics in India' ಎಂಬ ವಿಚಾರಸಂಕಿರಣವನ್ನು ಮಂಡಿಸಿದರು. ಭಾರತದಿಂದ ಪ್ರೊ. ಜಿ.ಶಂ.ಪರಮಶಿವಯ್ಯ ನವರು, ಪ್ರೊ. ವಿ.ನಾರಾಯಣ ರಾವ್, ಪ್ರೊ. ಆರ್.ವಿ.ಎಸ್.ಸುಂದರಂ, ಡಾ. ಕೋಮಲ್ ಕೊಥಾರಿ ಮೊದಲಾದ ವಿದ್ವಾಂಸರು ಹಾಗೆಯೇ ಅಮೇರಿಕಾದ ಸ್ಟುವರ್ಟ್, ಬ್ಲಾಕ್‌ಬರ್ನ್, ಪೀಟರ್ ಜೆ.ಕ್ಲಾಸ್, ಜಾಯ್ಸ್, ಸೂಸನ್ ವ್ಯಾಡ್ಲೇ, ಬ್ರೆಂಡಾಬೆಕ್ ಮುಂತಾದ ವಿದ್ವಾಂಸರು ತಮ್ಮ ತಮ್ಮ ಪ್ರಬಂಧಗಳನ್ನು ಮಂಡಿಸಿದರು. ನಂತರ 'Oral Epics in India' ಎಂಬ ಗ್ರಂಥವನ್ನು ೧೯೮೯ರಲ್ಲಿ ಪ್ರಕಟಿಸಿದರು. ಇದರಲ್ಲಿ ಭಾರತದ ಜಾನಪದ ಮಹಾಕಾವ್ಯಗಳ ಸ್ವರೂಪ, ಉದ್ದೇಶ, ರಚನೆ, ಈ ಮಹಾಕಾವ್ಯಗಳನ್ನು ಹಾಡುವ ಹಾಡುಗಾರರ ಜಾತಿ, ಬುಡಕಟ್ಟು ಅವುಗಳಿಗಿರುವ ಪರಸ್ಪರ ಸಂಬಂಧಗಳು, ರಾಮಾಯಣ ಮತ್ತು ಮಹಾಭಾರತಗಳನ್ನು ಆಧರಿಸಿ ಸೃಷ್ಟಿಯಾಗಿರುವ ಜನಪದ ಮಹಾಕಾವ್ಯಗಳು ಹೀಗೆ ಹಲವಾರು ಅಂಶಗಳನ್ನು ಸೂಕ್ಷ್ಮವಾಗಿ ಅಧ್ಯಯನ ನಡೆಸಿ ವಿಚಾರಮಾಡಿದ್ದಾರೆ.

ಭಾರತದ ಜನಪದ ಮಹಾಕಾವ್ಯಗಳ ಬಗೆಗೆ ನಡೆದಿದ್ದ ಮತ್ತು ಇಂಗ್ಲೀಷ್‌ನಲ್ಲಿ ಲಭ್ಯವಾಗಿದ್ದ ಸಾಮಗ್ರಿಗಳ ಆಧಾರದ ಮೇಲೆ ಈ ಕೃತಿಯು ರಚನೆಯಾಗಿದೆ. ಭಾರತದ ಹಲವು ಕಡೆ ಜಾನಪದ ಮಹಾಕಾವ್ಯಗಳ ಬಗ್ಗೆ ಆಯಾಭಾಷೆಗಳಲ್ಲಿ ವಿವಿಧೆಡೆ ಅಧ್ಯಯನಗಳು ನಡೆದಿವೆ. ಇಂಗ್ಲಿಷ್‌ನಲ್ಲಿ ಪ್ರಕಟವಾಗಿರುವುದು ಕಡಿಮೆ. "ಸ್ಟುವರ್ಟ್ ಬ್ಲಾಕ್‌ಬರ್ನ್ ಅವರು ಒಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅದು ಹೀಗಿದೆ: ಜನಪದ ಮಹಾಕಾವ್ಯ ಒಂದು ಜನಪದ ಗುಂಪಿನ ಸ್ವಯಂಪ್ರತಿಮೆ ಏನೆಂಬುದನ್ನು ತಿಳಿಸುತ್ತದೆ. ಆ ಗುಂಪಿನ ಇತಿಹಾಸದ ಯಾವುದೋ ಒತ್ತಡದ ಸ್ಥಿತಿಯಲ್ಲಿ ಹುಟ್ಟಿಕೊಂಡಿರಬೇಕು ಅಥವಾ ಒಂದು ವ್ಯವಸ್ಥೆಯಿಂದ ಇನ್ನೊಂದು ವ್ಯವಸ್ಥೆಗೆ ಆ ಸಮುದಾಯ

೧. ಜನಪದ ಮಹಾಕಾವ್ಯ – ಡಾ. ತೀ.ನಂ.ಶಂಕರನಾರಾಯಣ, ಪುಟ – ೨೨.

ವರ್ಗಾವಣೆಗೊಳ್ಳುವ ಒತ್ತಡದ ಸಂಕ್ರಮಣಾವಸ್ಥೆಯಲ್ಲಿ ಈ ಮಹಾಕಾವ್ಯಗಳು ಹುಟ್ಟಿಕೊಳ್ಳುತ್ತವೆ"[೧] ಎಂದಿದ್ದಾರೆ. ಭಾರತದ ಮಹಾಕಾವ್ಯಗಳ ಅಧ್ಯಯನಕ್ಕೆ ಐತಿಹಾಸಿಕವಾದ ಆಧಾರಗಳು ೧೨ ಮತ್ತು ೧೪ನೇ ಶತಮಾನದ ಕಥೆಗಳು ಪ್ರೇರಣೆಯಾಗಿವೆ ಮತ್ತು ಆಧಾರಗಳನ್ನು ಒದಗಿಸಿವೆ. ಈ ಮೇಲಿನ ಎಲ್ಲಾ ಕಥೆಗಳು, ಕೃತಿಗಳು, ವಿಚಾರಸಂಕೀರಣಗಳು ಜನಪದ ಮಹಾಕಾವ್ಯಗಳಿಗೆ ಪ್ರಮುಖವಾಗಿ ಮಾಹಿತಿಗಳನ್ನು ಒದಗಿಸಿ ಅಧ್ಯಯನಕ್ಕೆ ಆಸಕ್ತಿಯನ್ನು ಮತ್ತು ಪ್ರೇರಣೆಯನ್ನು ಒದಗಿಸಿವೆ.

**ಕರ್ನಾಟಕದಲ್ಲಿ ಜನಪದ ಮಹಾಕಾವ್ಯಗಳ ಅಧ್ಯಯನ**[೨]

ಕರ್ನಾಟಕದಲ್ಲಿ ಜನಪದ ಅಧ್ಯಯನ ಬಹಳಷ್ಟು ಕಾಲದವರೆ ಬಿಡಿಗೀತೆಗಳು, ಕಥನಕಾವ್ಯಗಳು, ಲಾವಣಿಗಳು, ಕಥೆ, ಗಾದೆ, ಒಗಟು ಈ ಮೊದಲಾದ ಕ್ಷೇತ್ರಗಳಿಗೆ ಸೀಮಿತವಾಗಿತ್ತು. 'ಏಳುಕೊಳ್ಳದ ಎಲ್ಲಮ್ಮ' ಎಂಬ ಕೃತಿಯಲ್ಲಿ ಮತ್ತಿಘಟ್ಟ ಕೃಷ್ಣಮೂರ್ತಿಯವರು ಸವದತ್ತಿ ಎಲ್ಲಮ್ಮನ ಬಗ್ಗೆ ಹಾಗೂ ಸಂಪ್ರದಾಯದ ಬಗ್ಗೆ ತಿಳಿಸಿದ್ದಾರೆ. ನಂತರ ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಸವದತ್ತಿ ಎಲ್ಲಮ್ಮ ಈ ಮಹಾಕಾವ್ಯಗಳ ಬಗ್ಗೆ ಸಂಗ್ರಹಕಾರ್ಯದಲ್ಲಿ ತೊಡಗಿ, ಸಂಶೋಧನಾತ್ಮಕವಾಗಿ ಕೆಲಸ ನಿರ್ವಹಿಸಿದ ವಿದ್ವಾಂಸರೆಂದರೆ ಪ್ರೊ. ಜೀ.ಶಂ.ಪರಮ ಶಿವಯ್ಯನವರು. ಇವರು 'ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು' ಎಂಬ ಮಹತ್ವದ ಕೃತಿಯನ್ನು ಹೊರತಂದು, ಧಾರ್ಮಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಅಭ್ಯಾಸ ಮಾಡಿದ್ದಾರೆ. ಈ ಗ್ರಂಥ ಮುಂದೆ ಜಾನಪದ ಕ್ಷೇತ್ರದಲ್ಲಿ ಅಧ್ಯಯನ ಮಾಡುವ ಪ್ರತಿಯೊಬ್ಬರು ಓದಲೇಬೇಕಾದ ಮತ್ತು ಮಾಹಿತಿಗಳು ಲಭ್ಯವಾಗುವಂತಹ ಪ್ರಮುಖ ಗ್ರಂಥವಾಗಿದೆ. ಪ್ರೊ. ಜೀ.ಶಂ.ಪರಮಶಿವಯ್ಯನವರೆ ಮಂಟೇಸ್ವಾಮಿ ಕಾವ್ಯವನ್ನು ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟಿಸಿ ಅದಕ್ಕೆ ಸೂಕ್ತವಾದ ಮುನ್ನುಡಿಯನ್ನು ಬರೆದಿದ್ದಾರೆ. ಇದೂ ಕೂಡ ಮಹತ್ವದ ಸಾಧನೆ ಎನಿಸಿದೆ. ಕನ್ನಡ ಜನಪದ ಸಾಹಿತ್ಯದ ಸಂಗ್ರಹ ಕಾರ್ಯಕ್ಕೆ ಪಾಶ್ಚಾತ್ಯರು ಗುದ್ದಲಿಪೂಜೆ ಮಾಡಿದ ಮೇಲೆ ಅವರು ಅನುಸರಿಸಿದ ಮಾರ್ಗದಲ್ಲೇ ನಮ್ಮ ಕನ್ನಡಿಗರು ಅನುಸರಿಸಿದರು. ಇತ್ತೀಚೆಗೆ ಕನ್ನಡಿಗರ ಪುಣ್ಯ ಎಂಬಂತೆ. ಪ್ರಾಚಾರ್ಯ ದೇ.ಜ.ಗೌ ಹಾಗೂ ಡಾ. ಹಾ.ಮಾ.ನಾಯಕರು ಕನ್ನಡ ಜಾನಪದ ಅಧ್ಯಯನಕ್ಕೆ ಭದ್ರಬುನಾದಿಯನ್ನು ಹಾಕಿಕೊಟ್ಟು ಜಾನಪದ ಕ್ಷೇತ್ರವನ್ನು ವಿಸ್ತರಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಈ ಕ್ಷೇತ್ರಕ್ಕೆ ಹೊಸ ಹುರುಪು, ಹೊಸ ತಿರುವು ಬರದಿದ್ದರೆ, ನಮ್ಮಲ್ಲಿರುವ ಎಷ್ಟೋ ಮಹಾಕಾವ್ಯಗಳು

---

೧. ಜನಪದ ಮಹಾಕಾವ್ಯ – ಡಾ. ತೀ.ನಂ.ಶಂಕರನಾರಾಯಣ, ಪುಟ – ೨೪.

೨. ಅದೇ, ಪುಟ – ೨೪.

ಬಿರುಗಾಳಿಗೆ ಸಿಕ್ಕಿ ನಾಶವಾಗುತ್ತಿದ್ದವು. ಅದೃಷ್ಟವಶಾತ್ ನಮ್ಮ ಭಾಗ್ಯವೋ ಎಂಬಂತೆ ಮಹಾಕಾವ್ಯಗಳು ಇಂದಿಗೂ ಕೂಡ ಜೀವಂತವಾಗಿ ಕನ್ನಡ ನಾಡಿನಲ್ಲಿ ಉಳಿದಿವೆ.

ಡಾ. ಪಿ.ಕೆ.ರಾಜಶೇಖರರವರು ಸುದೀರ್ಘವಾದ 'ಮಲೆಮಾದೇಶ್ವರ' ಕಾವ್ಯವನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ರಾಗೌ ಮತ್ತು ಪಿ.ಕೆ.ಆರ್ ರವರು ಒಟ್ಟಾಗಿ ಕೆಲಸ ನಿರ್ವಹಿಸಿ ಜನಪದ ರಾಮಾಯಣ ಮತ್ತು ಜನಪದ ಮಹಾಭಾರತ, ಜನಪದ ಬಸವಪುರಾಣ ಇವುಗಳನ್ನು ಪ್ರಕಟಿಸಿ ಜನಪದ ಸಾಹಿತ್ಯಕ್ಕೆ ಕೊಡುಗೆ ನೀಡಿದ್ದಾರೆ. ಇವೆಲ್ಲಾ ಆರಂಭಿಕ ಪ್ರಯತ್ನಗಳೇ ಎಂದು ಹೇಳಬಹುದಾಗಿದೆ. ೧೯೯೦ರಲ್ಲಿ ನಡೆಸಿದ 'ಇಂಡಿಯನ್ ಓರಲ್ ಎಪಿಕ್ಸ್' ಎಂಬ ವಿಚಾರ ಸಂಕಿರಣ, ಮಂಗಳೂರು ವಿಶ್ವವಿದ್ಯಾಲಯದಲ್ಲಿ ಮಹಾಕಾವ್ಯಗಳ ಬಗ್ಗೆ ತಿಳಿಸಿಕೊಟ್ಟಿದ್ದಾರೆ. ಇದರ ನೇತೃತ್ವ ವಹಿಸಿದ್ದವರು. ಡಾ.ವಿವೇಕರೈರವರು. ೧೯೯೫ರಲ್ಲಿ ಹೂವಿನಹಡಗಲಿಯಲ್ಲಿ ನಡೆದ ಜಾನಪದ ವಿಚಾರ ಸಂಕಿರಣ ಜನಪದ ಮಹಾಕಾವ್ಯಗಳ ಬಗ್ಗೆ ಪ್ರಬಂಧಗಳನ್ನು ಮಂಡಿಸಿದರು. ಇದೂ ಕೂಡ ಮಹತ್ವದ ಸಾಧನೆಯಾಗಿದೆ.[೧]

ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಜನಪದ ಮಹಾಕಾವ್ಯಗಳ ಬಗ್ಗೆ ಅಧ್ಯಯನ ಯೋಜನೆ ಹಾಕಿಕೊಂಡು ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಮೊದಲಾದ ಧಾರ್ಮಿಕ ಸಂಪ್ರದಾಯಗಳು ಮತ್ತು ಮಹಾಕಾವ್ಯಗಳ ಬಗ್ಗೆ ಅಧ್ಯಯನ ನಡೆಸಿದೆ. ಈ ವಿಶ್ವವಿದ್ಯಾನಿಲಯದ ಬುಡಕಟ್ಟು ಅಧ್ಯಯನ ವಿಭಾಗ-ದಿಂದ ಈ ಮಹಾಕಾವ್ಯಗಳ ದಾಖಲಾತಿ ಕಾರ್ಯ ಪ್ರಮುಖ ಬೆಳವಣಿಗೆಯಾಗಿದೆ. ಮಹಾಕಾವ್ಯಗಳ ಬಗ್ಗೆ ಕರ್ನಾಟಕದಲ್ಲಿ ಜಾನಪದ ವಿದ್ವಾಂಸರು ಮಾತ್ರವಲ್ಲದೆ, ವಿಮರ್ಶಕರೂ ಕೂಡ ಈ ಕ್ಷೇತ್ರದಲ್ಲಿ ಅತ್ಯಂತ ಆಸಕ್ತಿಯನ್ನು ತೋರಿರುವುದು ಕಂಡುಬರುತ್ತದೆ. ವಾಮನನಂದಾವರರವರು ದಕ್ಷಿಣ ಕನ್ನಡ ಜಿಲ್ಲೆಯ 'ಕೋಟಿ ಚೆನ್ನಯ್ಯ' ಎಂಬ ಕಾವ್ಯವನ್ನು ಪಿಎಚ್.ಡಿ., ಮಹಾಪ್ರಬಂಧ ರಚಿಸಿದರು ಮತ್ತು ಎಂ.ಎನ್.ವೆಂಕಟೇಶ್‌ರವರು ಮೈಲಾರಲಿಂಗನ ಸಂಪ್ರದಾಯ ಹಾಗೂ ಮೈಲಾರಲಿಂಗ ಮಹಾಕಾವ್ಯವನ್ನು ಮೈಲಾರದ ಜಾತ್ರೆಯ ಹಿನ್ನೆಲೆಯಲ್ಲಿ ಅಭ್ಯಾಸಮಾಡಿ 'ಮೈಲಾರದ ಜಾತ್ರೆಗಳು' ಎಂಬ ವಿಷಯದ ಬಗ್ಗೆ ಪಿಎಚ್.ಡಿ. ಮಹಾಪ್ರಬಂಧ ರಚಿಸಿದ್ದಾರೆ.

ಕರ್ನಾಟಕದ ವ್ಯಾಪ್ತಿಗೊಳಪಡುವ ಜನಪದ ಮಹಾಕಾವ್ಯಗಳಲ್ಲಿ ಅತ್ಯಂತ ಪ್ರಮುಖವಾದ ಅವಳಿ ಮಹಾಕಾವ್ಯಗಳೆಂದರೆ "ಮಲೆಯ ಮಾದೇಶ್ವರ ಮಹಾಕಾವ್ಯ"

---

೧. ಜನಪದ ಮಹಾಕಾವ್ಯ - ಡಾ. ತೀ.ನಂ.ಶಂಕರನಾರಾಯಣ, ಪುಟ - ೨೫.

ಮತ್ತು ಮಂಟೇಸ್ವಾಮಿ ಮಹಾಕಾವ್ಯ ಇವೆರಡೂ ಮೈಸೂರು, ಮಂಡ್ಯ, ಬೆಂಗಳೂರು ಜಿಲ್ಲೆಗಳ ವ್ಯಾಪ್ತಿಯಲ್ಲಿ ಬೆಳೆದುಬಂದಿವೆ.[೧]

ಕನ್ನಡ ನಾಡಿನ ಮಹಾಮಹಿಮನಾಗಿ ಮೆರೆದ ಮಲೆಯ ಮಾದೇಶ್ವರನ ಪ್ರಭಾವಶಾಲಿ ವ್ಯಕ್ತಿತ್ವ ಜನಸಾಮಾನ್ಯರ ಮೇಲೆ ಉಂಟುಮಾಡಿರಬಹುದಾದ ಪರಿಣಾಮ ಇಂತಹ ಮಹಾಕಾವ್ಯದ ಸೃಷ್ಟಿಗೆ ಕಾರಣವಾಗಿರಬಹುದು.

ಜನಪದ ಮಹಾಕಾವ್ಯಗಳನ್ನು ಕುರಿತು ೧೯ನೆಯ ಶತಮಾನದಿಂದಲೂ ಅಧ್ಯಯನಗಳು ನಡೆದಿವೆ. ಕಾಲದಿಂದ ಕಾಲಕ್ಕೆ ಅಧ್ಯಯನದ ವಿಧಾನಗಳು ಬದಲಾಗುತ್ತಾ ಬಂದಿರುವುದು ಕಂಡುಬರುತ್ತದೆ.

---

೧. ಮಲೆಯಮಾದೇಶ್ವರ – ಡಾ. ಪಿ.ಕೆ.ರಾಜಶೇಖರ, ಪುಟ – ೬.

# ಅಧ್ಯಾಯ – ೩

# ಜನಪದ ಕಾವ್ಯಗಳ ಪ್ರಕಾರಗಳು

ನಾಗರಿಕತೆ ಬೆಳೆದಂತೆಲ್ಲಾ ಜನತೆ ಅಕ್ಷರದಿಂದ ವಂಚಿತರಾದವರೇ ಹೊರತು ಅವಿದ್ಯಾವಂತರಲ್ಲ, ಮನುಷ್ಯನ ಜ್ಞಾನಭಂಡಾರದಲ್ಲಿ ಅದೆಷ್ಟೋ ಅನಂತ ಮುಖಗಳು ಅಡಗಿರುತ್ತವೆ. ನಾಗರಿಕತೆ ಬೆಳೆದಂತೆ ಇತ್ತೀಚಿನ ವಿದ್ವಾಂಸರು ಗ್ರಂಥರೂಪದಲ್ಲಿ ಅವುಗಳನ್ನು ಹಿಡಿದಿಡಲು ಪ್ರಯತ್ನಿಸಿದ್ದಾರೆ. ಎಷ್ಟೋ ಅಮೂಲ್ಯವಾದ ಕಾವ್ಯಗಳು, ಕಥೆಗಳು ಬರವಣಿಗೆಯ ರೂಪ ಕಾಣದೆ ಅನಾಥವಾಗಿವೆ. ಜಾನಪದ ಎಂದರೆ ಪರಂಪರಾನುಗತವಾಗಿ ಬೆಳೆದ ಸಂಪ್ರದಾಯಗಳ ಮೊತ್ತವೇ 'ಜಾನಪದ' ಮೊದ–ಮೊದಲು ವೃಷ್ಟಿಯ ಮನೋಗರ್ಭದಲ್ಲಿ ಹುದುಗಿಕೊಂಡಿದ್ದು ಕಾಲಾನುಕ್ರಮದಲ್ಲಿ ಅನೇಕ ತಲೆಮಾರುಗಳಿಂದ ಆಯ್ದು ಬಂದು ಈಗ ಸಾವಿರಾರು ಮುಖಗಳಿಂದ ಹೊರಹೊಮ್ಮುವಾಗ ಹೊಸ ಹೊಸ ರೂಪಗಳನ್ನು, ಆಕಾರಗಳನ್ನು ಹೊಂದಿ ತನ್ನ ಪಾತ್ರವನ್ನು ವಿಸ್ತರಿಸಿಕೊಂಡು ಹಾಗೂ ನಾಗರಿಕತೆಯೊಡನೆ ಸೆಣೆಸಾಡುತ್ತಾ ಬೆಳೆದು ಉಳಿದುಬಂದಿದೆ.

ಜಾನಪದ ಅಧ್ಯಯನ ಆದಿಮಾನವನಿಂದ ಇಂದಿನವರೆಗೂ ಬೆಳೆದುಜ್ಞಾನ ವಿಜ್ಞಾನಗಳೆರಡನ್ನು ತನ್ನೊಳಗಿನ ಅಂತಃಶಕ್ತಿಯಾಗಿ ಹುದುಗಿಸಿಕೊಂಡಿದೆ. ಶಿಷ್ಟ ಮತ್ತು ಜನಪದರ ಸಂಸ್ಕೃತಿ ಎರಡನ್ನು ಹೊಂದಿದ್ದು ಜನಪದ ಸಂಸ್ಕೃತಿಯೇ ಮೂಲವಾಗಿದೆ. ಇದು ಮಾತೃಸ್ಥಾನದಲ್ಲಿ ನಿಂತು ಜನಸಾಮಾನ್ಯರ ಬದುಕಿನ ಸರ್ವಸ್ವವನ್ನು ಒಳಗೊಂಡಿರುವ ವಿಶ್ವಕೋಶವೆನಿಸಿದೆ.

"ಜನಪದ ಸಾಹಿತ್ಯವೆನ್ನುವುದು ಜಾನಪದ ಚಕ್ರದ ಒಂದು ಪುಟಿ ಜನಪದ ಕಲೆ; ಜನಪದ ನೃತ್ಯ, ಜನಪದ ವೈದ್ಯ, ಜನಪದ ಉಡುಗೆ, ಜನಪದ ಸಂಗೀತ ಮೊದಲಾದವು ಮಿಕ್ಕ ಪುಟಿಗಳು. ಹಲವು ಪುಟಿಗಳು ಕೂಡಿ ತಾನೆ ಒಂದು ರಥದ ಚಕ್ರ? ಜನಪದ ಸಾಹಿತ್ಯ ಎನ್ನುವುದು ವಾಙ್ಮಯ ರೂಪದ ಜಾನಪದ"[೧] ಎಂದು ಹೇಳಿದ್ದಾರೆ.

"ಡಾ. ಹಾ.ಮಾ.ನಾಯಕರು ಜಾನಪದವನ್ನು ಸಾಹಿತ್ಯಕ ಬಗೆ, ಭಾಷಿಕ ಬಗೆ, ವೈಜ್ಞಾನಿಕ ಬಗೆ ಹಾಗೂ ಕ್ರಿಯಾತ್ಮಕ ಬಗೆ ಎಂದು ವಿಂಗಡಿಸಿದ್ದಾರೆ.[೨] ಈ ನಾಲ್ಕರ ಸಮಷ್ಟಿ ಸಂಪ್ರದಾಯವನ್ನೇ ನಾವು ಜಾನಪದ ಎಂದು ಕರೆಯುವುದು ಎಂದಿದ್ದಾರೆ.

---

೧. ಮಲೆಯಮಾದೇಶ್ವರ – ಡಾ. ಪಿ.ಕೆ.ರಾಜಶೇಖರ, ಪುಟ (ಪ್ರಸ್ತಾವನೆ) – ೧.

೨. ಅದೇ, ಪುಟ (ಪ್ರಸ್ತಾವನೆ) – ೨.

ನಗರ ಪ್ರದೇಶದಲ್ಲಿ ಜಾನಪದ ಅಂಶಗಳು ಇರಬಹುದಾದರೂ ನಾಗರಿಕತೆಯ ಪ್ರಭಾವಕ್ಕೆ ಸಿಕ್ಕಿ ನಾಶಹೊಂದಿದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ ಶುದ್ಧವಾದ ಜಾನಪದ ಅಂಶಗಳು ಉಳಿದು ಬೆಳೆದುಬಂದಿವೆ. ಕಥೆ, ಕಾವ್ಯ, ಲಾವಣಿ, ಒಗಟು, ಗಾದೆ, ನಂಬಿಕೆ, ಹಬ್ಬ, ಹುಣ್ಣಿಮೆ, ಆಚಾರ-ವಿಚಾರಗಳು, ಪುರಾಣ, ಐತಿಹಾಸಿಕ ಆಧಾರಗಳು, ಉಡುಗೆ-ತೊಡುಗೆ. ಇವು ಭಾರತ ಜಾನಪದ ಅಕ್ಷಯ ಪಾತ್ರೆಯಾಗಿದೆ. ಬರೀ ಜಾನಪದದಲ್ಲಿ ಕಥೆ, ಹಾಡು, ಪುರಾಣ, ಐತಿಹ್ಯ, ಲಾವಣಿ ಇವುಗಳಲ್ಲದೆ ಜನಪದ ಮಹಾಕಾವ್ಯಗಳು ಇಲ್ಲಿ ಉಗಮಗೊಂಡಿರುವುದನ್ನು ನಾವು ಕಾಣುತ್ತೇವೆ.

'ಜನಪದ ಮಹಾಕಾವ್ಯ' ಎಂದು ಹೇಳಿದರೆ ನಮ್ಮ ನೆನಪಿಗೆ ಬರುವುದು ಫಿನ್ಲೆಂಡಿನ 'ಕಾಲೇವಾಲ' ಅಂತಹ ಮಹಾಕಾವ್ಯಗಳು ನಮ್ಮ ಭಾರತದಾದ್ಯಂತ ಹಲವಾರು ಕಾವ್ಯಗಳು ಇವೆ. ಆದರೆ ಕನ್ನಡ ಜನಪದ ಸಾಹಿತ್ಯದ ಸಂಗ್ರಹ ಕಾರ್ಯವನ್ನು ಪರಿಪೂರ್ಣವಾಗಿ ಮಾಡುವುದಾದರೆ ನಮ್ಮ ನಾಡಿನ ಮಹಾಕಾವ್ಯಗಳನ್ನು ಮತ್ತು ಜನಪದ ಕಾವ್ಯಗಳನ್ನು ಬೆಳೆಸಬಹುದಾಗಿದೆ.

ಒಂದು ಜನಾಂಗದ ಸಾಂಸ್ಕೃತಿಕ ಇತಿಹಾಸವು ಆ ಜನತೆಯ ಹೃದಯವನ್ನು ಸೂರೆಗೊಂಡಾಗ ಐತಿಹ್ಯ ಪುರಾಣಗಳಾಗಿ ಪರಿವರ್ತನೆ ಹೊಂದಿ ಕಥನರೂಪದಲ್ಲಿ ಅಭಿವ್ಯಕ್ತಿಗೊಂಡಾಗ ವಸ್ತುನಿಷ್ಟ ಕಾವ್ಯವೊಂದು ರೂಪುಗೊಳ್ಳುತ್ತದೆ. ಈ ಕಾವ್ಯ-ಪರಂಪರೆಯು ಜನರ ಬಾಯಿಂದ ಬಾಯಿಗೆ ಬದಲಾವಣೆಯನ್ನು ಹೊಂದುತ್ತಾ, ಪಾತ್ರಗಳನ್ನು, ತನ್ನ ಗಾತ್ರಗಳನ್ನು ಮತ್ತು ಸೂತ್ರಗಳನ್ನು ವಿಸ್ತರಿಸುತ್ತಾ ಹೋಗುತ್ತದೆ. ಹೀಗೆ ಬಾಯಿಂದ ಬಾಯಿಗೆ ಬೆಳೆದ ಕಾವ್ಯ ಒಬ್ಬ ವ್ಯಕ್ತಿಯದಾಗದೆ ಸಮಗ್ರ ದೇಶದ ಅಥವಾ ಜನಾಂಗದ ವಾಣಿಯಾಗಿದೆ. ಆ ವಾಣಿಯು ಆ ಜನಾಂಗಕ್ಕೆ ಆಶ್ರಯದ ನೆರಳಿನಂತೆ ಕಾಪಾಡುತ್ತದೆ. ಆ ನಾಡಿನ ಆಚಾರ, ಆ ಜನಾಂಗದ ಭಾಷೆಯ ಜೀವನಾಡಿಯಂತಿರುವ ಸಂಸ್ಕೃತಿ, ವಿಚಾರ, ನಂಬಿಕೆ ಹೀಗೆ ಇಡೀ ರಾಷ್ಟ್ರದ ಸಮಗ್ರ ಪ್ರಜ್ಞೆಯ ಪ್ರತಿನಿಧಿಯಾಗಿ ಆ ರಾಷ್ಟ್ರವನ್ನು ಪ್ರತಿಬಿಂಬಿಸುತ್ತದೆ. "ಅದು ಆ ನಾಡಿನ ಆ ಜನಾಂಗದ ಆ ಭಾಷೆಯ ಜೀವನಾಡಿಯಂತಿರುವ ಸಂಸ್ಕೃತಿ, ಆಚಾರ, ವಿಚಾರ, ನಂಬಿಕೆ, ಸಂಪ್ರದಾಯ ಹೀಗೆ ಇಡೀ ರಾಷ್ಟ್ರದ ಸಮಷ್ಟಿ ಪ್ರಜ್ಞೆಯ ಪ್ರತಿನಿಧಿಯಾಗಿ ಆ ರಾಷ್ಟ್ರದ ಔನತ್ಯದ ಸಂಕೇತವಾಗಿ ಆವಿರ್ಭವಿಸುವ ಕೃತಿ ವಿಭೂತಿಯನ್ನು ನಾವು 'ಮಹಾಕಾವ್ಯ' ಎಂದು ಕರೆಯುತ್ತೇವೆ. ಈ ಕೃತಿ ಏಕ ಕವಿ ಕೃತವಾಗಿರದೆ ಸಮಷ್ಟಿಕೃತ-ವಾಗಿರುವುದರಿಂದ ಇದನ್ನು ಜನಪದ ಮಹಾಕಾವ್ಯ' ಎಂದು ಕರೆಯುತ್ತೇವೆ"[೧]

೧. ಮಲೆಯಮಾದೇಶ್ವರ – ಡಾ. ಪಿ.ಕೆ.ರಾಜಶೇಖರ, ಪುಟ (ಪ್ರಸ್ತಾವನೆ) – ೪.

"ಮಹಾಕಾವ್ಯಕ್ಕೆ ಇಂಗ್ಲಿಷ್‌ನಲ್ಲಿ Epic ಎಂಬ ಗ್ರೀಕ್ ಪದವೇ ಬಳಕೆಯಲ್ಲಿದೆ. Epic ಎಂಬ ಶಬ್ದಕ್ಕೆ Epopee ಎಂಬ ಪ್ರಯೋಗವೂ ಉಂಟು. ಈ ಶಬ್ದ Epos-Epikos ಅಂದರೆ Oral recitation or song ಎನ್ನಿಸುವುದರಿಂದ ಇದು ಮಹಾಕಾವ್ಯದ ಒಂದು ಬಗೆಯ ಉಗಮಸೂಚಕವಾಗಿದೆ, ಅಲ್ಲದೆ ವಾಚಕ ಪರಂಪರೆ ಕೃತಿರೂಪವಾಗುವ ಸೂಚನೆಯೂ ಇಲ್ಲಿದೆ.[೧]

ಮಾನವನ ಸಹಜ ಸ್ವಭಾವವೆಂದರೆ ಸಂಗೀತವನ್ನು ಆಲಿಸಿ ದೇವತೆಗಳ ಆರಾಧನೆಗೆ ಬಳಕೆಯಲ್ಲಿದ್ದ ಕುಣಿತಕ್ಕೆ ತಾಳಬದ್ಧ ಧ್ವನಿಗಳನ್ನು ಸೇರಿಸುತ್ತಿದ್ದ. ನಂತರ ಆ ಧ್ವನಿಗಳನ್ನು ಬಳಸದೇ ಕೆಲವು ಶಬ್ದಗಳನ್ನು ಬಳಸುತ್ತಿದ್ದರು. ಕೊನೆಗೆ ಗೀತೆಗಳ ರೂಪದಲ್ಲಿ ಹಾಡತೊಡಗಿರಬಹುದು. ಈ ಹಾಡುವ ಸಂಪ್ರದಾಯವೇ ಜನಪದ ಸಾಹಿತ್ಯವಾಗಿ ರೂಪುಗೊಂಡು ನಂತರ ಈ ವಸ್ತುನಿಷ್ಠವಾದ ಕಥನಗೀತೆಗಳ ಹಾಗೂ ಮಹಾಕಾವ್ಯಗಳ ಉಗಮ ಸ್ಥಾನವಾಗಿ ಕಂಡುಬಂದಿವೆ.

**ಜನಪದ ಮಹಾಕಾವ್ಯದ ಸ್ವರೂಪ**

ಮಹಾಕಾವ್ಯಗಳಲ್ಲಿ Tribal Epic, National Epic literary Epic ಮತ್ತು Folk Epic ಎಂಬ ಇತ್ಯಾದಿ ವಿಭಾಗಗಳಾಗಿ ವಿಂಗಡಿಸಿದ್ದಾರೆ. ಇದರಲ್ಲಿ ಬಹುಕವಿಕೃತವಾದ Folk Epic ಅನ್ನು Epic of Growth ವರ್ಗಕ್ಕೆ ಸೇರಿಸಿದ್ದಾರೆ. ಅಂದರೆ ಇದರಲ್ಲಿ ಹೆಚ್ಚು ವೀರ ಕಾವ್ಯಗಳೇ ಕಂಡುಬರುವುದರಿಂದ Heroic Epic ಎಂದು ಕರೆದಿದ್ದಾರೆ. ಏಕಕವಿಕೃತವಾದ ಮಹಾಕಾವ್ಯವನ್ನು Epic of Art ವರ್ಗಕ್ಕೆ ಸೇರಿಸುತ್ತಾರೆ".[೨]

ಜನಪದ ಮಹಾಕಾವ್ಯದ ಬೆಳವಣಿಗೆಯು ಒಬ್ಬರ ಬಾಯಲ್ಲಿ, ಒಂದು ಘಟನೆ ನಿರ್ಮಾಣವಾಗಿ ಮತ್ತೊಬ್ಬರಿಂದ ಮತ್ತೊಂದು ಘಟನೆ ಸೃಷ್ಟಿಯಾಗಿ ಹಲವಾರು ವ್ಯಕ್ತಿಗಳಿಂದ ಬೆಳೆಯುತ್ತಲೇ ಹೋಗುತ್ತದೆ. ಒಂದು ಘಟನೆಯ ಮೇಲೆ ಮತ್ತೊಂದು ಘಟನೆ ಮೈಚಾಚುತ್ತಾ ಹುತ್ತದಂತೆ ಬೆಳೆಯುವ ಇದನ್ನು Accretion Epic ಎಂದು ಕರೆಯುತ್ತಾರೆ. ಇದೇ ನಿಜವಾದ ಮಹಾಕಾವ್ಯ ಹಾಗೂ ಸಹಜವಾದ ಮಹಾಕಾವ್ಯ. ಈ ರೀತಿಯ ಕೃತಿ ಅನಾಗರಿಕ ಜನರಿಂದ ಅನೇಕ ತಲೆಮಾರುಗಳಲ್ಲಿ ಬೆಳೆದು-ಬಂದುದಾದುದರಿಂದ 'Primitive Epic' ಎಂಬ ಪದವನ್ನು ಬಳಸುತ್ತಾರೆ. ಬಾಯಿಂದ ಬಾಯಿಗೆ ಪಠಣ ರೂಪದಲ್ಲಿ ಹರಿದು ಬಂದುದರಿಂದ 'oral Epic' ಎಂದು

---

೧. ಮಲೆಯಮಾದೇಶ್ವರ – ಡಾ. ಪಿ.ಕೆ.ರಾಜಶೇಖರ, ಪುಟ (ಪ್ರಸ್ತಾವನೆ) – ೪.

೨. ಅದೇ, ಪುಟ – ೪.

ಕರೆಯುತ್ತಾರೆ. ಹಲವರ ಹೃದಯವನ್ನು ಚಿತ್ತಸ್ಪಂದನದಿಂದ ಸೃಷ್ಟಿಯಾಗಿರುವ ಕಾರಣದಿಂದ Invented Epic ಎಂದು ಕರೆಯಲಾಗಿದೆ. ಇಡೀ ಜನಪದದ ಆಚಾರ ವಿಚಾರ, ರೀತಿ–ನೀತಿ, ನಡವಳಿಕೆಗಳೆಲ್ಲವನ್ನು ತಿಳಿಸುವುದರಿಂದ ಇದಕ್ಕೆ ಸಾಂಸ್ಕೃತಿಕ ಮಹಾಕಾವ್ಯವೆಂದು ಕರೆಯುತ್ತಾರೆ. "ಡಾ. ತೀ.ನಂ.ಶಂಕರನಾರಾಯಣ ಅವರು ಜನಪದ ಮಹಾಕಾವ್ಯಗಳು "ಗತಕಾಲದ ಜನರ ಲೋಕದೃಷ್ಟಿಯನ್ನು ಅಥವಾ ಅವರ ಬದುಕಿನ ದೃಷ್ಟಿಕೋನವನ್ನು, ಅವರ ಆಸೆ, ಆಶೋತ್ತರಗಳನ್ನು ಮಾತ್ರ ಹೇಳುತ್ತಿಲ್ಲ. ಅವು ಇಂದಿಗೂ ಜನರ ಜೀವನದಲ್ಲಿ ಪರಿಣಾಮ ಬೀರುತ್ತಿವೆ"[೧] ಎಂದು ಹೇಳಿದ್ದಾರೆ.

ಜನಪದ ಮಹಾಕಾವ್ಯ ಎಂಬ ಪರಿಕಲ್ಪನೆ ಅದನ್ನು ಹಾಡುವ ಮತ್ತು ಕೇಳುವ ಜನರಲ್ಲಿ ಇರುವಂತಹದಲ್ಲ, ಅದನ್ನು ವಿದ್ವಾಂಸರು ಅಭ್ಯಾಸದ ಸಲುವಾಗಿ ರೂಢಿಸಿಕೊಂಡಿದ್ದಾರೆ. ವಿದ್ವಾಂಸರು ಯಾವುದನ್ನು ಮಹಾಕಾವ್ಯ ಎನ್ನುತ್ತಾರೋ ಅದನ್ನೆ ಹಾಡುವವರು ಮತ್ತು ಕೇಳುವವರು ಹಾಡು, ಪದ, ಕಥೆ ಎಂದು ಕರೆಯುತ್ತಾರೆ. ಇದನ್ನೇ ಸಾಂಸ್ಕೃತಿಕ ಪ್ರಕಾರ ಎಂದು ಕರೆಯಬಹುದು. ಜನಪದ ಮಹಾಕಾವ್ಯಗಳ ಬಗ್ಗೆ ಧ್ವನಿ ಎತ್ತಿದವರು. ಫಿನ್ಲೆಂಡಿನ ಜನಪದ ವಿದ್ವಾಂಸರು ಮತ್ತು ಜರ್ಮನಿಯ ಚಿಂತಕ ಹರ್ಡರ್‌ನ ರೊಮ್ಯಾಂಟಿಕ್ ರಾಷ್ಟ್ರೀಯವಾದ ಜನಪದ ಮಹಾಕಾವ್ಯಗಳ ಅಸ್ತಿತ್ವವನ್ನು ಗುರುತಿಸಲು ಮತ್ತು ಅದರ ಬಗ್ಗೆ ಅಧ್ಯಯನಗಳನ್ನು ನಡೆಸಲು ಪ್ರೇರಣೆಯನ್ನು ಒದಗಿಸಿದರು.

ಭಾರತದಲ್ಲಿ ಬಿಟ್ಟರೆ ಪಾಶ್ಚಾತ್ಯ ದೇಶಗಳಾದ ರಷ್ಯಾ, ಚೈನಾ, ಜಪಾನ್ ದೇಶಗಳಲ್ಲೂ ಕೂಡ ಜಾನಪದ ಮಹಾಕಾವ್ಯಗಳ ಅಧ್ಯಯನ ನಡೆದಿದೆ. ಮಹಾಕಾವ್ಯಗಳೂ ಯಾವಾಗಲೂ ಸಾಹಸಗಳನ್ನು ಕುರಿತದ್ದಾಗಿರುತ್ತದೆ. ಗಾತ್ರದಲ್ಲಿ ದೊಡ್ಡದಾಗಿರುತ್ತದೆ. ಒಬ್ಬ ವೀರ ಆಯಾ ದೇಶದ ಅಥವಾ ಸಾಂಸ್ಕೃತಿಕ ಗುಂಪಿನ ಹಿತರಕ್ಷಣೆ ಕಾಪಾಡುವ ಹೊಣೆಗಾರಿಕೆ ಹೊಂದಿದ್ದು ಪ್ರಾಣತ್ಯಾಗ ಮಾಡುತ್ತಾನೆ. ಅವನು ಸತ್ತ ನಂತರ ಆ ದೇಶದ, ಆ ಸಾಂಸ್ಕೃತಿಕ ವರ್ಗದ ಜನರು ದೇವರೆಂದು ಪೂಜೆ ಮಾಡುವುದು ವಾಡಿಕೆ ಇದೆ. ಈ ದೇವರಿಗೆ ಹೊಂದಿಕೊಂಡಂತೆ ಕಾವ್ಯ ರಚನೆ–ಯಾಗಿರುತ್ತದೆ. ಚಿಕ್ಕದಾಗಿದ್ದರೆ ಖಂಡಕಾವ್ಯದ ವ್ಯಾಪ್ತಿಯನ್ನು ಹೊಂದಿರುತ್ತದೆ. ದೀರ್ಘವಾಗಿದ್ದರೆ ಮಹಾಕಾವ್ಯದ ಸ್ವರೂಪವನ್ನು ಪಡೆದುಕೊಳ್ಳುತ್ತದೆ.

ಈ ದೇವತೆಯ ಹೆಸರಿನಲ್ಲಿ ಜಾತ್ರೆಗಳು, ಆಚರಣೆಗಳು ನಡೆಯುತ್ತವೆ. ಹಾಡುಗಾರರು ಈ ಕಾವ್ಯಗಳನ್ನು ಕಥೆಯ ರೂಪದಲ್ಲಿ ಹಾಡುತ್ತಾರೆ. ಹಾಗಾಗಿ ಜನಪದ

---

೧. ಕರ್ನಾಟಕ ಜನಪದ ಮಹಾಕಾವ್ಯಗಳು ತೀ.ನಂ.ಶಂಕರನಾರಾಯಣ, ಪುಟ– ೧೭.

ಮಹಾಕಾವ್ಯ ಆಯಾ ಸಾಂಸ್ಕೃತಿಕ ವರ್ಗದ ಮತ್ತು ಆ ದೇಶದ ಪುರಾಣವೇ ಆಗಿರುತ್ತದೆ. ಜಾತ್ರೆಗಳಲ್ಲಿ ಕೆಲವು ಭಾಗವನ್ನು ಮಾತ್ರ ಹಾಡಲಾಗುತ್ತದೆ. ಪೂರ್ಣವಾಗಿ ಹೇಳುವುದಿಲ್ಲ. ಇದನ್ನು ಸಮಗ್ರವಾಗಿ ದಾಖಲೆಮಾಡಿಕೊಂಡಾಗ ಮಾತ್ರ ಮಹಾಕಾವ್ಯಗಳ ಸುದೀರ್ಘ ವ್ಯಾಪ್ತಿ ಬರುತ್ತದೆ. ಅಂದರೆ ಘಟನೆಗಳನ್ನು ಸಂಗ್ರಹಿಸಿ ಕಾಲಾನುಕ್ರಮವಾಗಿ ಜೋಡಿಸಿ ಅವುಗಳಿಗೆ ಒಂದು ರೂಪವನ್ನು ಕೊಟ್ಟಾಗ ಮಹಾಕಾವ್ಯ ಎನಿಸಿಕೊಳ್ಳುತ್ತದೆ.

ಜನಪದ ಮಹಾಕಾವ್ಯಗಳ ಗಾತ್ರ ಎಷ್ಟಿರಬೇಕು ಎಂಬುದರ ಅರಿವು ದೇಶದಿಂದ ದೇಶಕ್ಕೆ ವಿವಿಧ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ವಾಸ್ತವವಾಗಿ ರಷ್ಯಾದಲ್ಲಾಗಲೀ, ಫಿನ್ಲೆಂಡಿನಲ್ಲಾಗಲಿ ಸಾವಿರ ಸಾಲುಗಳಿಗೆ ಹೆಚ್ಚಾಗಿರುವ ಜನಪದ ಮಹಾಕಾವ್ಯಗಳಿಲ್ಲ. ಇಲ್ಲಿ ಕಥನ ಕಾವ್ಯಗಳೇ ಹೆಚ್ಚಾಗಿ ಕಂಡುಬರುತ್ತವೆ. ಈ ಕಥನ ಗೀತೆಗಳೆಲ್ಲವನ್ನೂ ಒಬ್ಬ ಕಲಾವಿದನೆ ಹಾಡಿಲ್ಲ. ಹಲವಾರು ಕಲಾವಿದರಿಂದ ಸಂಗ್ರಹಿಸಿ ಫಿನ್ಲೆಂಡಿನ ವೀರರಿಗೆ ಸಂಬಂಧಿಸಿದ ಕಥನಗೀತೆಗಳಿಗೆ ಒಂದು ಸಂಬಂಧವನ್ನು ಕಲ್ಪಿಸಿ ಒಂದು ಮಹಾಕಾವ್ಯವನ್ನು ರೂಪಿಸಿದ್ದಾರೆ. ಅದೇ 'ಕಲೇವಾಲ'ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದಿದೆ.

ಎರಡನೆಯ ಬಗೆಯ ಜನಪದ ಮಹಾಕಾವ್ಯವೆಂದರೆ ಒಬ್ಬನೇ ಹಾಡುಗಾರ ಒಬ್ಬ ವೀರನಿಗೆ ಅಥವಾ ವೀರ ಸ್ತ್ರೀಗೆ ಸಂಬಂಧಿಸಿದಂತೆ ಸುದೀರ್ಘವಾಗಿ ಹಾಡುವ ಸುದೀರ್ಘ ರಚನೆಯಾಗಿದೆ. ಇಲ್ಲಿ ಬರುವ ಅನೇಕ ಪ್ರಸಂಗಗಳು ತಿಳಿದಿರುತ್ತವೆ. ಕನ್ನಡದ ಮಲೆಯ ಮಾದೇಶ್ವರ, ಮಂಟೇಸ್ವಾಮಿ ಜುಂಜಪ್ಪ ಮೊದಲಾದ ಮಹಾಕಾವ್ಯಗಳು ಈ ೨ನೇ ಪ್ರಕಾರಕ್ಕೆ ಸೇರುತ್ತವೆ. ಈ ಮಹಾಕಾವ್ಯಗಳನ್ನು ಒಬ್ಬೊಬ್ಬ ಹಾಡುಗಾರರೇ ಅನೇಕ ಘಂಟೆಗಳ ಕಾಲ ಹಾಡುತ್ತಾರೆ. "ರಷ್ಯನ್ ಜನಪದ ಮಹಾಕಾವ್ಯಗಳ ಬಗ್ಗೆ ಅಧ್ಯಯನ ಮಾಡಿದ ವ್ಲಾಡಿಮಿರ್ ಪ್ರಾಪ್ ಅವರು ಜನಪದ ಮಹಾಕಾವ್ಯದ ಗಾತ್ರದ ಬಗ್ಗೆ ಹೆಚ್ಚು ಗಮನ ಕೊಡುವುದಿಲ್ಲ. ಆ ಕಾವ್ಯದಲ್ಲಿ ವೀರರಿರಬೇಕು. ವೀರರ ಸಾಹಸದ ಕಥೆ ಇರಬೇಕು ಮತ್ತು ಒಂದು ಸಾಮಾಜಿಕ ವರ್ಗದ ಅಥವಾ ರಾಷ್ಟ್ರದ ಸಂಘಟನೆಗೆ ನೆರವಾಗುವಂತಿರಬೇಕು ಎಂದು ಅಭಿಪ್ರಾಯ-ಪಡುತ್ತಾರೆ.[೧]

ಪ್ರಾಪ್ ಎಂಬ ವಿದ್ವಾಂಸ ಜನಪದ ಕಾವ್ಯಗಳ ಬಗ್ಗೆ ಪರಿಚಯವಿರಲಿಲ್ಲ. ಅವರು ಜನಪದ ಖಂಡಕಾವ್ಯಗಳನ್ನೇ ಮಹಾಕಾವ್ಯಗಳೆಂದು ಭಾವಿಸಿದಂತೆ ತೋರುತ್ತದೆ.

---

೧. ಜನಪದ ಮಹಾಕಾವ್ಯ-ಡಾ. ತೀ.ನಂ.ಶಂಕರನಾರಾಯಣ, ಪುಟ – ೯.

ಅವುಗಳ ಗಾತ್ರವನ್ನು ಆದರಿಸಿ. ಕಡಿಮೆ ವ್ಯಾಪ್ತಿಯನ್ನು ಖಂಡಕಾವ್ಯಗಳೆಂದೂ, ದೀರ್ಘವ್ಯಾಪ್ತಿಯದನ್ನು ಮಹಾಕಾವ್ಯಗಳೆಂದು ವರ್ಗೀಕರಿಸಿದ್ದಾರೆ.

ಬಹಳ ಕಾಲದವರೆಗೆ ಯುರೋಪಿನ ವಿದ್ವಾಂಸರಿಗೆ ಯೂರೋಪಿನಾಚೆಗೆ ಇತರ ದೇಶಗಳಲ್ಲಿ ಜನಪದ ಮಹಾಕಾವ್ಯಗಳಿವೆ ಎಂಬ ಅರಿವು ಇರಲಿಲ್ಲ. ಕಳೆದ ಮೂರು ದಶಕಗಳಿಂದ ನಡೆದಿರುವ ಅಧ್ಯಯನಗಳಿಂದ ಅನೇಕ ದೇಶಗಳಲ್ಲಿ ಜನಪದ ಮಹಾಕಾವ್ಯಗಳಿರುವ ವಿಷಯ ತಿಳಿದು ಅವುಗಳ ವರ್ಗೀಕರಣದ ಬಗ್ಗೆ ಚಿಂತಿಸಿದ್ದಾರೆ. ಈ ಹಿನ್ನೆಲೆಯಲ್ಲಿ 'ಹಾಟ್ಪೋ' ಎಂಬ ಜಾನಪದ ವಿದ್ವಾಂಸರು ಜಗತ್ತಿನ ಮಹಾಕಾವ್ಯಗಳನ್ನು ನಾಲ್ಕು ಬಗೆಗಳಾಗಿ ವಿಂಗಡಿಸಿದ್ದಾರೆ.

೧) ಪೂರ್ಣ ಮೌಖಿಕ: ಮಂಗೋಲಿಯಾ, ಭಾರತ, ಆಫ್ರಿಕಾ

೨) ಅರೆ ಮೌಖಿಕ : ಹೋಮರನ ಮಹಾಕಾವ್ಯಗಳು

೩) ಮೌಖಿಕೋತ್ತರ: ಹಳೆಯ ಪ್ರೆಂಚ್ ಮತ್ತು ಮಧ್ಯಕಾಲೀನ ಸ್ಪಾನಿಷ್ ಮಹಾಕಾವ್ಯಗಳು

೪) ದ್ವಿತೀಯ ಹಂತದ ಮಹಾಕಾವ್ಯಗಳು: ಏನಿಡ್, ಫ್ಯಾರಾಡೈಸ್ ಲಾಸ್ಟ್

ಜನಪದ ಮಹಾಕಾವ್ಯಗಳ ಬಗ್ಗೆ ಕುರಿತು ಹಲವಾರು ವಿದೇಶಿ ವಿದ್ವಾಂಸರು ಭಾರತದ ಮಹಾಕಾವ್ಯಗಳ ಬಗ್ಗೆ ಕುರಿತು ಒಂದೊಂದು ಭಾಷೆಯ ಜನಪದ ಮಹಾಕಾವ್ಯವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡುವುದರ ಜೊತೆಗೆ, ಭಾರತದ ಜನಪದ ಮಹಾಕಾವ್ಯಗಳ ಸ್ವರೂಪದ ಬಗ್ಗೆ ತೌಲನಿಕವಾಗಿ ಅಧ್ಯಯನ ನಡೆಸಿದ್ದಾರೆ. ಅವರುಗಳೆಂದರೆ ಸ್ಟುವರ್ಟ್, ಬ್ಲಾಕ್‌ಬರ್ನ್, ಬ್ರೆಂಡಾಬೆಕ್, ಪೀಟರ್‌ಕ್ಲಾಸ್ ಮೊದಲಾದ ಅಮೇರಿಕನ್ ವಿದ್ವಾಂಸರು ಮತ್ತು ಫಿನ್ಲೆಂಡಿನ ಜಾನಪದ ವಿದ್ವಾಂಸರಾದ ಲೌರಿ ಹೋಂಕೋ ವಿಭಿನ್ನ ದೃಷ್ಟಿಕೋನಗಳಿಂದ ಪರಿಶೀಲಿಸಿದ್ದಾರೆ.

ಬ್ರೆಂಡಾಬೆಕ್ ಅವರು 'ಮಹಾಕಾವ್ಯವೆಂದರೆ ಅದೊಂದು ಮಹೋನ್ನತ ಕಥೆ ಅದೊಂದು ಜನಪದ ಪ್ರಕಾರವಾದದ್ದು ನಿರೂಪಣಾ ಕಾವ್ಯವಾಗಿರುತ್ತದೆ'[೧] ಎಂದಿದ್ದಾರೆ. ಜನಪದ ಮಹಾಕಾವ್ಯದಲ್ಲಿ ೫ ಅಂಶಗಳನ್ನು ಗುರುತಿಸಿದ್ದಾರೆ.(ತಮಿಳುನಾಡಿನ ಅವಳಿ ವೀರ ಸಹೋದರರ ಕಥೆ)

೧) ಅದು ವೃತ್ತಿಗಾಯಕರಿಂದ ಪ್ರದರ್ಶನಗೊಳ್ಳುತ್ತದೆ.

೨) ಈ ಪ್ರದೇಶದಲ್ಲಿ ಗಮನಕ್ಕೆ ಬಂದ ಕಾವ್ಯಗಳಲ್ಲಿ ಅತ್ಯಂತ ದೀರ್ಘಕಾವ್ಯ

೩) ಈ ಕಾವ್ಯದ ವೀರರು ಸ್ಥಳೀಯ ದೇವಾಲಯಗಳಲ್ಲಿ ಪೂಜಿಸಲ್ಪಡುತ್ತಿದ್ದಾರೆ.

---

೧. ಅದೇ, ಪುಟ – ೧೧.

೪) ವಿಸ್ತೃತ ಪೌರಾಣಿಕ ಹಾಗೂ ನಾಗರಿಕ ಪರಂಪರೆಗಳ ಜೊತೆ ಹೊಂದಾಣಿಕೆಯುಳ್ಳದ್ದು.

೫) ಈ ಕಥೆಯಲ್ಲಿ ನಿರೂಪಿಸಿದ ಸಂಗತಿಗಳು ಒಂದು ಕಾಲದಲ್ಲಿ ನಡೆದಿದ್ದವು ಎಂದು ಗಾಯಕರು ಹಾಗೂ ಪ್ರೇಕ್ಷಕರು ಬಹುವಾಗಿ ನಂಬಿದ್ದಾರೆ.[೧]

ಸ್ಟುವರ್ಟ್ ಎಂಬ ಮತ್ತು ಬ್ಲಾಕ್‌ಬರ್ನ್ ಅವರು ಭಾರತದ ಜನಪದ ಮಹಾಕಾವ್ಯಗಳ ಬಗ್ಗೆ ಅವುಗಳ ವ್ಯಾಪ್ತಿಯ ಆಧಾರದ ಬಗ್ಗೆ ಅವುಗಳನ್ನು ೪ ವಿಭಾಗಗಳಾಗಿ ವಿಂಗಡಿಸಿದ್ದಾರೆ.

೧) **ಸ್ಥಳೀಯ ಮಹಾಕಾವ್ಯಗಳು:–** ಸುಮಾರು ೧೦ ಮೈಲಿಗಳಿಂದ ೧೦೦ ಮೈಲಿಗಳ ವ್ಯಾಪ್ತಿಯಲ್ಲಿ ಇರುವ ಮಹಾಕಾವ್ಯಗಳು.

ಉದಾ: ತಮಿಳುನಾಡಿನ ತಂಪಿಮಾರ್, ದಕ್ಷಿಣ ಕನ್ನಡ ಜಿಲ್ಲೆಯ ಕೋರ್ದಬ್ಬು, ಪಾಡ್ದನ

೨) **ಉಪ–ಪ್ರಾದೇಶಿಕ ಮಹಾಕಾವ್ಯಗಳು:–** ಸುಮಾರು ೧೦೦ ರಿಂದ ೨೦೦ ಮೈಲಿಗಳ ವ್ಯಾಪ್ತಿಯಲ್ಲಿ ಇರುವ ಮಹಾಕಾವ್ಯಗಳು.

ಉದಾ: ಆಂಧ್ರದ ಪಾಲ್ನಾಡು ವೀರಚರಿತೆ, ತಮಿಳುನಾಡಿನ ಅಣ್ಣನ್ಮಾರ್ ಕಥೈ, ಕರ್ನಾಟಕದ ಜುಂಜಪ್ಪನ ಕಾವ್ಯ.

೩) **ಪ್ರಾದೇಶಿಕ ಮಹಾಕಾವ್ಯಗಳು:–** ಸುಮಾರು ೨೦೦ ರಿಂದ ೩೦೦ ಮೈಲಿಗಳ ವ್ಯಾಪ್ತಿಗೆ ಸೇರಿರುವ ಮಹಾಕಾವ್ಯ.

ಉದಾ: ರಾಜಸ್ಥಾನದ ಪಾಬೂಜಿ, ದೇವನಾರಾಯಣ

೪) **ಅತಿ–ಪ್ರಾದೇಶಿಕ ಮಹಾಕಾವ್ಯಗಳು:–** ೩೦೦ ಮೈಲಿಗಿಂತ ಹೆಚ್ಚಿನ ವ್ಯಾಪ್ತಿಯುಳ್ಳ ಮಹಾಕಾವ್ಯಗಳು. ಉದಾ: ಧೋಲಾ, ಅಲ್ಹಾ, ರಾಜಾಸ್ಥಾನದ, ಗೂಗಾ

ಬ್ಲಾಕ್‌ಬರ್ನ್ ಗುರುತಿಸಿರುವಂತೆ ೩ ಬಗೆಯವು. ಧಾರ್ಮಿಕ ಸ್ವರೂಪದಾಗಿದ್ದು ಆಚರಣಾತ್ಮಕ ಸ್ವರೂಪವನ್ನು ಹೊಂದಿದೆ ಎಂದು ತಿಳಿಸುತ್ತಾರೆ. ಈ ರೀತಿಯ ವರ್ಗೀಕರಣ ಅಪರಿಪೂರ್ಣವಾದುದು ಎಂದು ಬ್ಲಾಕ್‌ಬರ್ನ್‌ರವರೇ ಅಭಿಪ್ರಾಯಪಟ್ಟಿದ್ದಾರೆ. ಇವರೇ ಹೇಳುವಂತೆ ಭಾರತೀಯ ಜನಪದ ಮಹಾ ಕಾವ್ಯಗಳು ವೀರ, ತ್ಯಾಗ ಹಾಗೂ ರಮ್ಯ ಸ್ವರೂಪದ ಮಹಾಕಾವ್ಯಗಳೆಂದಿದ್ದಾರೆ.

**ಜನಪದ ಮಹಾಕಾವ್ಯದ ಲಕ್ಷಣಗಳು**

ಜಾನಪದ ಎನ್ನುವುದು ಒಂದು ಪರಂಪರೆ. ಅದರ ಅಂಗ ಜನಪದ ಸಾಹಿತ್ಯ. ಅದರ ಪದ್ಯ ಪ್ರಕಾರಗಳು ಜನಪದ ಗೀತೆ, ಜನಪದ ಕಥನಗೀತೆ ಅಥವಾ ಲಾವಣಿ ಹಾಗೂ ಜನಪದ ಮಹಾ ಕಾವ್ಯಗಳು. ಈ ಎಲ್ಲಾ ಪ್ರಕಾರಗಳು ಕೆಲವು ಸಮಾನವಾದ

---

೧. ಜನಪದ ಮಹಾಕಾವ್ಯ– ಡಾ. ತೀ.ನಂ ಶಂಕರನಾರಾಯಣ, ಪುಟ – ೧೧.

ಅಂಶಗಳನ್ನು ಒಳಗೊಂಡಿರುತ್ತವೆ. ಆದ್ದರಿಂದ ಅವುಗಳ ಲಕ್ಷಣಗಳಲ್ಲೂ ಸಮಾನತೆ ಕಂಡುಬರುವುದು ಸಹಜವಾದ ವಿಷಯವಾಗಿದೆ. ಜನಪದ ಮಹಾಕಾವ್ಯ ಕೆಲವು ವಿಶೇಷ ಲಕ್ಷಣಗಳನ್ನು ಒಳಗೊಂಡಿದೆ.

ಜನಪದ ಗೀತೆಗಳು ಹೊಸ ಹೊಸದಾಗಿ ಹುಟ್ಟುವುದಕ್ಕಿಂತ ಹಳೆಯ ಗೀತೆಗಳು ಗಾಯಕರ ಕೈಯಲ್ಲಿ ಅಥವಾ ಬಾಯಲ್ಲಿ ಬೆಳೆಯುತ್ತಾ ಹೋಗುತ್ತವೆ. ಈತನನ್ನು ಗಮಕಿ ಅಥವಾ ಕಲಾವಿದನೆಂದು ಗುರ್ತಿಸುತ್ತಾರೆ ವಿನಾ ಕರ್ತೃವೆಂದು ಕರೆಯುವುದಿಲ್ಲ. ಅವನು ನಿರಂತರವಾಗಿ ಸೇರಿಸುತ್ತಾನೆ, ಪರಿಷ್ಕರಿಸುತ್ತಾನೆ, ಆಗಾಗ ಬದಲಾವಣೆ ಮಾಡುತ್ತಾನೆ. ಈ ಬೆಳವಣಿಗೆ, ಬದಲಾವಣೆಗಳಿಂದ ಭಿನ್ನ ಪಾಠಗಳು, ಸಂಪ್ರದಾಯ-ಗಳು, ಭಿನ್ನರೂಪಗಳು ಹುಟ್ಟಿಕೊಳ್ಳುತ್ತವೆ. ಈ ಪ್ರಕ್ರಿಯೆ ದೀರ್ಘಕಾಲೀಕವಾದದ್ದು. ವಾಕ್ಪರಂಪರೆ ಸಾಮೂಹಿಕ ಸೃಷ್ಟಿಗಳ ಪರಿಣಾಮವಾಗಿ ಜನಪದ ಗೀತೆಗಳಲ್ಲಿ ಪುನರಾವರ್ತನೆಗಳು ಮತ್ತೆ ಮತ್ತೆ ಮರುಕಳಿಸುತ್ತವೆ.

ಜನಪದ ಗೀತೆಗಳಲ್ಲಿ ಅನೇಕ ಲಕ್ಷಣಗಳನ್ನು ಗುರ್ತಿಸಿದ್ದಾರೆ. ಅವುಗಳೆಂದರೆ ಇದರಲ್ಲಿ ಕರ್ತೃ ಯಾರು ಎಂಬುದು ನಿರ್ದಿಷ್ಟವಾಗಿಲ್ಲ, ಸಾಮೂಹಿಕವಾಗಿ ಬೆಳವಣಿಗೆ ಪಡೆದಿದೆ. ವಾಕ್ಪರಂಪರೆಯ ಶುದ್ಧ ಹಾಗೂ ಚಂಚಲ ಸ್ಥಿತಿಯನ್ನು, ಜನಪ್ರಿಯತೆಯನ್ನು ಒಳಗೊಂಡಿರುತ್ತದೆ. ಈ ಗೀತೆಗಳು ಹಲವರ ಮನಸ್ಸಿನಲ್ಲಿ ಹಾದು ಹೋಗಿ ರಾಷ್ಟ್ರೀಯ ಸ್ವರೂಪವನ್ನು ಹೊಂದಿವೆ. ಜನಪದ ಗೀತೆಗಳು ಸಾಮಾನ್ಯತೆಯನ್ನು ಬಿಂಬಿಸುತ್ತವೆ. "ಹಾಡಿನ ರೂಪದಲ್ಲಿ ರಾಷ್ಟ್ರೀಯ ಮನೋಧರ್ಮದ ಸಹಜಾಭಿವ್ಯಕ್ತಿ" ಎಂದು ಕರೆಯುತ್ತಾರೆ. ಗೀತೆಗಳನ್ನು ಹಾಡುವುದನ್ನು ಒಂದು ವೃತ್ತಿಯನ್ನಾಗಿ ಅವಲಂಬಿಸಿದ್ದಾರೆ.

ಜನಪದ ಕಥನಗೀತೆ ಅಥವಾ ಲಾವಣಿ ಇವೆರಡೂ ಬೇರೆ ಬೇರೆ ಎಂದು ಭಿನ್ನಾಭಿಪ್ರಾಯಗಳನ್ನು ಕಾಣುತ್ತೇವೆ. ಸಾರ್ಜೆಂಟ್ ಮತ್ತು ಕಿಟ್ರೆಡ್ಜ್ ಅವರ ಹೇಳಿಕೆಯಂತೆ "ಲಾವಣಿಯೆಂದರೆ ಒಂದು ಕಥೆಯನ್ನು ಹೇಳುವ ಹಾಡು ಅಥವಾ ಹಾಡಿನಲ್ಲಿ ಹೇಳಲಾದ ಒಂದು ಕಥೆ"[೧] ಲಾವಣಿಗಳ ಬೆಳವಣಿಗೆಗೆ ಕಾರಣರಾದವರು ವೃತ್ತಿಗಾಯಕರು, ಇವರು ಅರಿತವರು, ನುರಿತ ವ್ಯಕ್ತಿಗಳಾಗಿದ್ದು ಅನೇಕ ತಂತ್ರಗಳನ್ನು ಬಲ್ಲವರಾಗಿರುತ್ತಾರೆ. ತಕ್ಕ ಮಟ್ಟಿಗೆ ಸಾಹಿತ್ಯ ಪ್ರಜ್ಞೆಯುಳ್ಳ ಕವಿಗಳ ಸೃಷ್ಟಿ. ಬೇರೆ ಬೇರೆ ಭಾಗಗಳಲ್ಲಿ ಈ ವೃತ್ತಿಗಾಯಕರಲ್ಲಿ ಹಲವಾರು ಸಂಪ್ರದಾಯಗಳನ್ನು ಕಾಣುತ್ತೇವೆ. ಅವರ ಸಂಪ್ರದಾಯಕ್ಕೆ ತಕ್ಕ ವಾದ್ಯಗಳನ್ನು ಬಳಸಿಕೊಳ್ಳುತ್ತಾರೆ. ವಾದ್ಯಗಳಿರಬೇಕು ಎಂಬ ನಿಯಮವೇನು ಇವುಗಳಲ್ಲಿ ಇಲ್ಲ.

---

೧. ಕರ್ನಾಟಕ ಜಾನಪದ ಮಹಾಕಾವ್ಯಗಳು, ಡಾ. ತೀ.ನಂ. ಶಂಕರನಾರಾಯಣ, ಪುಟ- ೨.

ಮಾಹಾಕಾವ್ಯಗಳಲ್ಲಿ ಎರಡು ಪ್ರಕಾರಗಳನ್ನು ಗುರ್ತಿಸಿದ್ದಾರೆ.

೧) ವಾಚಿಕ ಮಹಾಕಾವ್ಯ ೨) ಲಿಖಿತ ಮಹಾಕಾವ್ಯ

ಮೊದಲನೆಯ ಗುಂಪಿಗೆ ಸೇರಿದ ಮಹಾಕಾವ್ಯಕ್ಕೆ ಹಲವಾರು ಹೆಸರುಗಳಿಂದ ಕರೆಯುತ್ತಾರೆ. ಅವುಗಳೆಂದರೆ ವಿಕಾಸಶೀಲ ಮಹಾಕಾವ್ಯ, ರಾಷ್ಟ್ರೀಯ ಮಹಾಕಾವ್ಯ ಆದಿಯ ಮಹಾಕಾವ್ಯ, ಸಂಚಿತಮಹಾಕಾವ್ಯ, ಅಧಿಕೃತ ಮಹಾಕಾವ್ಯ ಹೀಗೆ ಕರೆದಿರುವುದುಂಟು ಇದು ಒಟ್ಟಾರೆಯಾಗಿ ರಾಷ್ಟ್ರೀಯ ಕಾವ್ಯವಾಗಿರುತ್ತವೆ. ಈ ಸಾಲಿನಲ್ಲೇ ಜನಪದ ಮಹಾಕಾವ್ಯಗಳು ಸೇರಿಕೊಳ್ಳುತ್ತವೆ. ವಾಚಿಕ ಮಹಾಕಾವ್ಯಗಳು ಹೇಗೆ ರೂಪುಗೊಳ್ಳುತ್ತವೆ ಎಂದರೆ ಎರಡು ವಾದಗಳನ್ನು ಮಂಡಿಸಿದ್ದಾರೆ.

೧) ಚೆಲ್ಲಾಪಿಲ್ಲಿಯಾಗಿದ್ದ ಕವನಗಳನ್ನು ಒಟ್ಟುಗೂಡಿಸಿ ಮಹಾಕಾವ್ಯಗಳನ್ನು ರೂಪಿಸಿದರು.

೨) ಆಂತರಿಕ ಬೆಳವಣಿಗೆಯ ಫಲವಾಗಿ ಮಹಾಕಾವ್ಯಗಳು ರೂಪುಗೊಂಡವು. ವೀರಘಟನೆ ಅಥವಾ ಐತಿಹ್ಯ ಇಂಥ ಕಾವ್ಯದ ವಸ್ತುವಾಗಿರುತ್ತದೆ.

ವಾಚಿಕ ಮಹಾಕಾವ್ಯಗಳಲ್ಲಿ ಆಧ್ಯಾತ್ಮಿಕ ಮನೋಧರ್ಮ ಮತ್ತು ಸಾಂಸ್ಕೃತಿಕ ಆಸಕ್ತಿ, ಸಾಹಿತ್ಯ ಪರಂಪರೆಗಳ ಪ್ರಸಾರವನ್ನು ಕಾಣುತ್ತೇವೆ. ಸಂಚಾರಿ ಗಾಯಕರ ಯುಗದಲ್ಲಿ ವಾಚಿಕ ಮಹಾಕಾವ್ಯಗಳು ಹುಟ್ಟಿವೆ. ಉದಾ: ಗ್ರೀಕ್ ಪರಂಪರೆಯ ಹೋಮರ್, ರಾಮಾಯಣವನ್ನು ವಾಲ್ಮೀಕಿ ಲವಕುಶರಿಗೆ ಕಲಿಸಿದ್ದು ಅವರು ಆಸ್ಥಾನದಲ್ಲಿ ರಾಮನ ಮುಂದೆ ಹೇಳಿದ್ದನ್ನು ಗುರ್ತಿಸಬಹುದಾಗಿದೆ. ವಾಚಿಕ ಮಹಾ ಕಾವ್ಯಗಳಲ್ಲಿ, ವಾಸ್ತವಿಕತೆ, ಕಲ್ಪನೆಗಳು, ಇತಿಹಾಸ, ಸಮನ್ವಯಗೊಂಡಿರುವುದನ್ನು ನಾವು ಕಾಣುತ್ತೇವೆ. ಮಹಾಕಾವ್ಯ ಎನ್ನುವುದು "ಚರಿತೆ ಕವಿತೆಗಳ ರಾಜಿ" ಆದರೆ ಚರಿತ್ರೆಗೆ ಅದು ಬದಲಿಯಲ್ಲ ಎಂಬುದನ್ನು ನೆನಪಿಡಬೇಕಾಗುತ್ತದೆ.

ವಾಚಿಕ ಮಹಾಕಾವ್ಯ ವೀರ ಕಾವ್ಯವೂ ಆಗಿರುತ್ತದೆ. ವೀರಕಾವ್ಯದಲ್ಲಿ ನಡೆಯುವ ಕ್ರಿಯೆಗಳು ಮೂಲತಃ ಮಾನವರವು, ವೀರಕಾವ್ಯ ಮನುಷ್ಯರೊಡನೆ ವ್ಯವಹರಿಸುತ್ತದೆ. ಇದರ ಮುಖ್ಯವಾದ ಆಸಕ್ತಿ ಮಾನವರಲ್ಲ, ದೇವರುಗಳು ಅದರ ನಾಯಕರಲ್ಲ. ಇವು ವಾಚಿಸಲು ಯೋಗ್ಯವಾಗಿದ್ದು, ಛಂದಸ್ಸು ಅಗತ್ಯವಾಗಿದ್ದು ಸಾಮಾನ್ಯವಾಗಿ ಪದ್ಯಗಳಲ್ಲಿ ರಚಿತವಾಗದೆ, ಬಿಡಿ ಸಾಲುಗಳಲ್ಲಿ ರಚಿತವಾಗುತ್ತವೆ. ರಚನೆಯ ಮೂಲ ಮಾನ ಪಂಕ್ತಿಯಾಗಿರುತ್ತದೆ. ಪಂಕ್ತಿಯಿಂದ ಕೂಡಿರುತ್ತದೆ. ಸಂಗೀತಕ್ಕೆ ಅಧೀನಗೊಂಡಿರುತ್ತದೆ. ಬಹುಪಾಲು ವೀರ ಕವಿತೆ, ಆಶು ಕವಿತೆ ಯಾಗಿರುತ್ತದೆ.

ಜನಪದ ಮಹಾಕಾವ್ಯದ ಬಗ್ಗೆ ಫೆಲಿಕ್ಸ್.ಜೆ. ಒಯಿನಸ್ ಅವರು ಹೇಳಿರುವಂತ ವಿಚಾರಗಳನ್ನು ಗಮನಿಸಿದರೆ. ಜನಪದ ಮಹಾಕಾವ್ಯ ಆರಂಭ ಮುಕ್ತಾಯ ಇಲ್ಲದಷ್ಟು ಪ್ರಾಚೀನಕ್ಕೆ ಹೋಗುತ್ತದೆ. ಅದು ಮೇಲ್ವರ್ಗದ ರಾಜ ಪರಿವಾರದ ಗಾಯಕರಲ್ಲಿ ಹುಟ್ಟಿರಬಹುದು. ನಂತರ ಕೆಳವರ್ಗಗಳ ವೃತ್ತಿಗಾಯಕರು ಅವುಗಳನ್ನು ವಹಿಸಿಕೊಂಡಿರ ಬಹುದು. ರೈತಾಪಿ ಮತ್ತು ಕಾರ್ಮಿಕ ಜನ ಜನಪದ ಮಹಾಕಾವ್ಯದಲ್ಲಿ ವಹಿಸಿದ ಪಾತ್ರ ಬಹುಮುಖ್ಯವಾದುದು. ಆದರೆ ಪ್ರಮುಖ ಪಾತ್ರಗಳು ಸಾಮಾನ್ಯ ಮಂದಿಯಲ್ಲಿ ಅದರ ದೀರ್ಘತೆಯಿಂದ ವ್ಯತ್ಯಾಸವಾಗುತ್ತದೆ. ಆಡಂಬರದಿಂದ ಕೂಡಿದ್ದು, ಸಂಪ್ರದಾಯಗಳ ಬದ್ಧತೆ ಒಳಗೊಂಡಿರುವುದರಿಂದ ಸಿದ್ಧ ವಿಶೇಷಣಗಳು ಮತ್ತು ನುಡಿಗಟ್ಟುಗಳು ಜನಪದ ಮಹಾಕಾವ್ಯಗಳಲ್ಲಿ ಕಂಡುಬರುತ್ತವೆ.

ವೃತ್ತಿಗಾಯಕರು ಹಾಡುಗಳನ್ನು ಬಾಯಿಪಾಠ ಮಾಡುವುದಿಲ್ಲ. ಅವುಗಳಲ್ಲಿರುವ ವಿಶಿಷ್ಟವಾದ ತಿರುವುಗಳನ್ನು ಮಾತ್ರ ನೆನಪಿಡುತ್ತಾರೆ. ನಿರಂತರವಾದ ಕ್ರಿಯೆಯು ಕಾವ್ಯದಲ್ಲಿ ಕಂಡುಬರುವುದರಿಂದ ಜನಪದ ಮಹಾಕಾವ್ಯವನ್ನು ಯಾವುದಾದರೊಂದು ತಂತಿವಾದ್ಯದ ಸಹಾಯದಿಂದ ಸ್ತ್ರೀ–ಪುರುಷರಿಬ್ಬರೂ ಕೂಡ ಹಾಡುತ್ತಾರೆ.

ಜನಪದ ಮಹಾಕಾವ್ಯವನ್ನು ೪ ವರ್ಗಗಳಾಗಿ ವಿಂಗಡಿಸಿದ್ದಾರೆ.

೧) ಮಾಂತ್ರಿಕ ಮಹಾಕಾವ್ಯ ೨) ವೀರ ಕಾವ್ಯ, ೩) ರೋಮ್ಯಾಂಟಿಕ್ ಮಹಾಕಾವ್ಯ, ೪) ಚಾರಿತ್ರಿಕ ಮಹಾಕಾವ್ಯ

ಹೀಗೆ ಅಲ್ಲಿರುವ ಕಥಾ ವಸ್ತುವಿನ ಆಧಾರದ ಮೇಲೆ ಅವುಗಳನ್ನು ವರ್ಗೀಕರಣ ಮಾಡಿರುವುದು ಕಂಡುಬರುತ್ತದೆ.

"ಕನ್ನಡದಲ್ಲಿ ಜನಪದ ಮಹಾಕಾವ್ಯಗಳ ಬಗ್ಗೆ ಮೊದಲು ವಿಚಾರ ಮಾಡಿದವರು ಡಾ.ಜೀ.ಶಂ.ಪರಮಶಿವಯ್ಯನವರು. ದಕ್ಷಿಣ ಕರ್ನಾಟಕದ ವೃತ್ತಿಗಾಯಕ ಪರಂಪರೆ ಗಳನ್ನು ಬೆಳಕಿಗೆ ತಂದರು. ಅವರು ಈ ಪರಂಪರೆಗಳನ್ನು ಧಾರ್ಮಿಕ ಮತ್ತು ಲೌಕಿಕ ಎಂದು ಎರಡು ಬಗೆಗಳಾಗಿ ವರ್ಗೀಕರಿಸಿದ್ದಾರೆ. ವೃತ್ತಿಗಾಯಕರು ಹಾಡುವ ಕಾವ್ಯಗಳನ್ನು ಕುರಿತು ಚರ್ಚಿಸಿ ಮತ್ತು ಧಾರ್ಮಿಕ ಕಾವ್ಯಗಳನ್ನು ಕುರಿತು ವಿಚಾರ ಮಾಡಿ ಖಂಡಕಾವ್ಯ ಅಥವಾ ಮಹಾಕಾವ್ಯದ ರೂಪದಲ್ಲಿರುತ್ತವೆ ಎಂದು. ಆ ಪರಂಪರೆಗಳ ಲಕ್ಷಣಗಳನ್ನು ಈ ರೀತಿ ಗುರ್ತಿಸಿದ್ದಾರೆ."[೧]

೧. ಜಾನಪದ ಮಹಾಕಾವ್ಯ – ಡಾ. ತೀನಂಶ್ರೀ (ಜನಪದ ಮಹಾಕಾವ್ಯದ ಸ್ವರೂಪ), ಪುಟ – ೧೪

೧. ತಮ್ಮ ಅಧಿದೈವಕ್ಕೆ ಸಂಬಂಧಿಸಿದ ಜನಪದ ಕಾವ್ಯವೊಂದನ್ನು ಪರಂಪರಾನುಗತವಾಗಿ ಕಾಪಾಡಿಕೊಂಡು ಬಂದ, ಹಾಡಿಕೊಂಡು ಬಂದ ವಿಶಿಷ್ಟ ಕಾಯಕ ವರ್ಗವೊಂದು ಇರುತ್ತದೆ.

೨. ದೈವದ ಸಂಕೇತವಾದ ಜನಪದ ವಾದ್ಯಗಳನ್ನು ಬಳಸಿ ಮೇಳಗಳೋಪಾದಿಯಲ್ಲಿ ಆ ಕಾವ್ಯಗಳನ್ನು ಹಾಡಲಾಗುತ್ತದೆ. ಈ ವಾದ್ಯಗಳನ್ನು ಉಳಿದ ಸಂದರ್ಭದಲ್ಲಿ ದೇವರ ಗದ್ದುಗೆಯ ಮೇಲಿಟ್ಟು ಪೂಜಿಸಲಾಗುತ್ತದೆ.

೩. ದೇವರ ಲಾಂಛನಗಳನ್ನು ಧರಿಸಿ ವಿಶೇಷ ಮತಾಚರಣೆಯ ಸಂದರ್ಭಗಳಲ್ಲಿ ಅಥವಾ ಪೂಜಾ ಸಂದರ್ಭದಲ್ಲಿ, ಹಬ್ಬಹರಿದಿನಗಳಲ್ಲಿ ಯಾತ್ರೆ, ಜಾತ್ರೆಗಳಲ್ಲಿ ಮಾತ್ರ ಹಾಡಬಹುದಾದ ಕಾವ್ಯಗಳಾಗಿರುತ್ತವೆ.

೪. ಕೊನೆಯ ಪಕ್ಷ ಒಂದು ರಾತ್ರಿಯಾದರೂ ಹಾಡುವಷ್ಟು ಕಾವ್ಯಗಳಾಗಿರುತ್ತವೆ.

೫. ಸಾಮಾನ್ಯವಾಗಿ ಅಧಿದೈವ ಕಥಾನಾಯಕನಾಗಿ ಅಥವಾ ಮುಖ್ಯ ಪಾತ್ರವಾಗಿ ಕಾಣಿಸಿಕೊಳ್ಳಬಹುದು. ಇಲ್ಲವೆ ಆ ದೈವದ ದಳಪತಿ, ಶಿಷ್ಯ, ಹಿಂಬಾಲಿಕೆ ಆ ಸ್ಥಾನದಲ್ಲಿ ಕಾಣಬಹುದು.

೬. ಕಥೆ ಎಲ್ಲಿಂದಲೋ ಪ್ರಾರಂಭವಾಗಿ ಸಂಬಂಧಪಟ್ಟ ಪುಣ್ಯಕ್ಷೇತ್ರದಲ್ಲಿ ಐಕ್ಯಗೊಳ್ಳುವುದು. ಅಥವಾ ಅಲ್ಲಿಂದಲೇ ಆರಂಭವಾಗಿ ಹತ್ತು ದಿಕ್ಕಿನಲ್ಲಿ, ಹತ್ತು ಪ್ರದೇಶಗಳಲ್ಲಿ ನಡೆದಾಡಬಹುದು.

೭. ಜನಪದ ಮಹಾಕಾವ್ಯಲದಲಿ ಒಕ್ಕಲು ಮಾಡಿಕೊಳ್ಳುವ ಭಕ್ತರನ್ನು, ಶಿಷ್ಯರನ್ನೂ ಪಡೆಯುವ ಉದ್ದೇಶವನ್ನು ಕಥಾನಾಯಕ ತನ್ನ ಮಹಿಮೆಗಳನ್ನು ಮೆರೆಯಬಹುದು, ಇಲ್ಲವೇ ದುಷ್ಟ ಶಿಕ್ಷಣ ಶಿಷ್ಟರಕ್ಷಣೆಯ ಮಹಿಮೆಗಳನ್ನು ಹೊಂದಿರಬಹುದು.

೮. ಜನಪದ ಮಹಾಕಾವ್ಯದಲ್ಲಿ ಶುದ್ಧ ಪದ್ಯರೂಪದಲ್ಲಿ ಇಲ್ಲವೇ ಗದ್ಯ ಪದ್ಯ ಮಿಶ್ರಿತ ರೀತಿಯಲ್ಲಿ ಇರುತ್ತವೆ. ಬರಿಯ ಕಾವ್ಯದಲ್ಲೇ ಇರುವ ಕಥೆ ಈ ವ್ಯಾಪ್ತಿಗೆ ಬರಲಾರದು ವಾದ್ಯವನ್ನು ಹಿಡಿದುಕೊಂಡು ಹಾಡಬೇಕಾದುದರಿಂದ ಅನಿವಾರ್ಯವಾಗಿ ಹಿಮ್ಮೇಳ-ಮುಮ್ಮೇಳಗಳು ಇರುತ್ತವೆ.

೯. ಯಾವ ದೈವ ಕಥೆಯನ್ನು ಹಾಡುತ್ತಾರೋ ಅಂಥವರಿಗೇ ಆ ದೈವದ ಹೆಸರಿನಲ್ಲಿ ದೀಕ್ಷೆ ಆಗಿರಬೇಕು. ದೀಕ್ಷೆಯನ್ನು ನೀಡುವವನು ಹಿರಿಯ ಗುಡ್ಡನಾಗಿರಬಹುದು. ಇಲ್ಲವೇ ಕ್ಷೇತ್ರಕ್ಕೆ ಸಂಬಂಧಿಸಿದ ಶ್ರೀಮಠವೊಂದರಲ್ಲಿನ ಗುರುವೊಬ್ಬನಿಂದ ದೀಕ್ಷೆ ಪಡೆಯಬಹುದು.

೧೦. ಕಥಾನಾಯಕ ದೈವದ ವ್ಯಾಪ್ತಿಗೆ ಸೇರಿದ ಒಬ್ಬ ಮಹಾಪುರುಷನಾಗಿರಬಹುದು. ಅನಿರೀಕ್ಷಿತವಾಗಿ ಉದ್ಭವವಾದ ಶಕ್ತಿ ವಿಶೇಷವಾಗಿರಬಹುದು.

೧೧. ಕಥೆಗೆ ಸಂಬಂಧಿಸಿದ ನಾಯಕನಿಗೆ ಸಂಬಂಧಿಸಿದ ಅವಶೇಷಗಳು ಅವುಗಳ ಐತಿಹ್ಯಗಳೂ ನಿರ್ದಿಷ್ಟ ಸ್ಥಳಗಳಲ್ಲಿ ದೊರೆಯಬೇಕು.

೧೨. ಹಿಂದೊಮ್ಮೆ ನಿಜವಾಗಿ ನಡೆದ ಕಥೆಯೇ ಎಂಬಂತೆ ಅದು ನಿರೂಪಿತ–ವಾಗಿರಬೇಕು.[೧]

ಡಾ.ಜೀ.ಶಂ. ಪರಮಶಿವಯ್ಯನವರು ವ್ಯಾಪಕವಾದ ಅಧ್ಯಯನದಿಂದ ಜನಪದ ಮಹಾಕಾವ್ಯದ ಪರಂಪರೆಯ ಲಕ್ಷಣಗಳನ್ನು ಸಮರ್ಪಕವಾಗಿ ಗುರ್ತಿಸಿದ್ದಾರೆ.

ಹೀಗೆ ಜನಪದ ಮಹಾಕಾವ್ಯ ತನ್ನದೇ ಆದ ಕೆಲವೊಂದು ವಿಶಿಷ್ಟವಾದ ಸ್ವರೂಪಗಳನ್ನು ಮತ್ತು ಲಕ್ಷಣಗಳನ್ನು ಒಳಗೊಂಡಿರುವುದನ್ನು ಕಾಣುತ್ತೇವೆ.

೧. ಜಾನಪದ ಮಹಾಕಾವ್ಯ – ಡಾ. ತೀನಂಶ್ರೀ, (ಜನಪದ ಮಹಾಕಾವ್ಯದ ಸ್ವರೂಪ), ಪುಟ – ೧೪.

## ಅಧ್ಯಾಯ – ೪

# ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ

### ಮಲೆಯ ಮಾದೇಶ್ವರನ ಕಥಾಸಾರ

ಕನ್ನಡ ನಾಡಿನಲ್ಲಿ ಪೂರ್ವಘಟ್ಟಗಳ ಪ್ರಕೃತಿ ಸೌಂದರ್ಯದ ಮಡಿಲಲ್ಲಿ ಹಾಗೂ ಕಾವೇರಿ ತೀರದ ಪೊನ್ನಾಚಿ ಬೆಟ್ಟದ ತಪ್ಪಲು ಪ್ರದೇಶದಲ್ಲಿರುವ ಆನೆಮಲೆ, ಕಾನಮಲೆ, ಗುತ್ತಿಮಲೆ, ಚೆರುವಮಲೆ, ಗಾಳಿಪೂಜೆ ಮಲೆ, ಮಂಜುಮಲೆಗಳ ೭೭ ಮಲೆಗಳ ನಡುವಿನಲ್ಲಿರುವ ನಡುಮಲೆ, ಅತ್ಯಂತ ರಮಣೀಯವಾಗಿ ಮೆರೆಯುವ ಬೀಡಾಗಿದೆ. ಅದೇ ಮಲೆಯ ಮಾದೇಶ್ವರನ ತಪೋವನವಾಗಿದ್ದು, ಅದು ಇಂದು ಕರ್ನಾಟಕ ಮತ್ತು ತುಮಿಳುನಾಡುಗಳ ಲಕ್ಷಾಂತರ ಭಕ್ತರಿಗೆ ಪವಿತ್ರ ಕ್ಷೇತ್ರವಾಗಿದೆ. ಶಿವರಾತ್ರಿ ಕಾರ್ತಿಕ ಮಾಸಗಳಲ್ಲಿ ಲಕ್ಷಾಂತರ ಜನರು ಬಂದು ಪರಿಷೆ ನಡೆಸುತ್ತಾರೆ.

ಈ ಪುಣ್ಯಕ್ಷೇತ್ರವು ಕೊಳ್ಳೇಗಾಲದಿಂದ ಸುಮಾರು ೬೦ ಮೈಲಿಗಳ ಅಂತರದಲ್ಲಿರುವ ಮಾದೇಶ್ವರನ ಬೆಟ್ಟಕ್ಕೆ ಪೂರ್ವಾಭಿಮುಖವಾಗಿ ಮಧುವನಹಳ್ಳಿ, ಸಿಂಗಾನಲ್ಲೂರು, ಕಾಮಗೆರೆ, ಹನೂರು, ಅಜ್ಜೀಪುರ, ರಾಮಾಪುರ, ಕೌದಳ್ಳಿ ಮಾರ್ಗವಾಗಿ ಹೋದರೆ ಅಲ್ಲಿಂದ ಹತ್ತು ಮೈಲಿಯಲ್ಲಿ ಹೋದರೆ ಮಾದೇಶ್ವರ ಸ್ವಾಮಿಯ ಬೆಟ್ಟದ ತಪ್ಪಲು 'ತಾಳಬೆಟ್ಟ' ಸಿಕ್ಕುತ್ತದೆ. ಅಲ್ಲಿಂದ ಏಳು ಬೆಟ್ಟಗಳನ್ನು ಹತ್ತಿ ಇಳಿದರೆ ನಡುಮಲೆ ಸಿಗುತ್ತದೆ. ತಾಳಬೆಟ್ಟದಿಂದ ನಡುಮಲೆಗೆ ಎರಡು ದಾರಿಗಳಿವೆ. ಒಂದು ಬಸವನ ದಾರಿ, ಇನ್ನೊಂದು ಸರ್ಪನ ದಾರಿ. ಮೊದಲನೆಯದು ಕಡಿದಾದ ದಾರಿಯಿಂದ ಕೂಡಿದೆ. ೨ನೆಯದು ಸುಗಮವಾಗಿದೆ.[೧]

ಈ ಕ್ಷೇತ್ರದಲ್ಲಿ ಆನುಮಲೆ, ಜೇನುಮಲೆ, ಗುಂಜಿಮಲೆ, ಗುರುಗಂಜಿ ಮಲೆ, ಕಾನುಮಲೆ, ಕಂಬತ್ತಿಮಲೆ, ಕಡುದಾಕ್ಷಿಮಲೆ, ಪದುಮಮಲೆ, ಪಚ್ಚೆಮಲೆ, ಪೂಜೆಮಲೆ, ಕೊಂಗುಮಲೆ, ಕೋನಾಚಿಮಲೆ, ಸಂಕುಮಲೆ, ರುದ್ರಾಕ್ಷಿಮಲೆ, ಭದ್ರಾಕ್ಷಿಮಲೆ, ಮಂಜುಮಲೆ, ಈಬುತ್ತಿಮಲೆ, ಭಸುಮಂಗಮಲೆ, ಗಾಳಿಮಲೆ, ಗೌಳಮಲೆ, ನಡುಮಲೆ ಎಂಬ ಸುಮಾರು ೭೭ ಮಲೆಗಳಿವೆ ಎಂದು ಜನಪದರು ಹೇಳುತ್ತಾರೆ. ಈ ಸ್ಥಳಗಳಲ್ಲಿ ಮಾದೇಶ್ವರ ಸಂಚರಿಸಿರುವುದಲ್ಲದೆ ತಪಸ್ಸು ಮಾಡಿದ ಸ್ಥಳಗಳೆಂದೂ, ಎಲ್ಲಾ ಮಲೆಗಳಲ್ಲೂ ಒಂದೊಂದು ದೇವರಿರುವರೆಂದು ಹೇಳುತ್ತಾರೆ. ಈ ಮಲೆಗಳಿಗೆ ಈ ರೀತಿ ಹೆಸರು ಬರಲು ಕಾರಣವನ್ನು ಯಾರು ನಿರ್ದಿಷ್ಟವಾಗಿ ಹೇಳಿಲ್ಲ.

---

೧. ಮಾದೇಶ್ವರ ಸಮೀಕ್ಷೆ; ಹ.ಜ.ಶಿವಶಂಕರಪ್ಪ.

ಕುಂತೂರು ಮಠದಿಂದ ಮಾದೇಶ್ವರ ಹೊರಟು ಏಳುಮಲೆಯ ನಡುವೆ ನೆಲಸಿರುವ ಎಲ್ಲಾ ಘಟನೆಗಳನ್ನು ವಿವರಿಸುವ ಐತಿಹ್ಯಗಳನ್ನು ಜನಪದರು ಹೇಳುತ್ತಾರೆ. ಮತ್ತೆ ಜನಪದ ಐತಿಹ್ಯಗಳು ಇನ್ನೂ ಇವೆ. ಬೆಟ್ಟಕ್ಕೆ ಕಾಲುದಾರಿಯಲ್ಲಿ ಕೊಳ್ಳೇಗಾಲ-ದಿಂದ ಹೊರಟರೆ ಮಾದೇಶ್ವರ ಕುಂತೂರು ಸ್ವಾಮಿಗಳಿಗೆ ಮಂಡಿಯೂರಿ ನಮಸ್ಕಾರ ಮಾಡಿದ ಸ್ಥಳ ಮರಡಿಗುಡ್ಡ. ಮಾದೇಶ್ವರನನ್ನು ಹಇಡಿಯಲು ಬಸವ ಪ್ರಯತ್ನಿಸಿದ ಸ್ಥಳ ಸುತ್ತಗಟ್ಟೆ. ಮಾದೇಶ್ವರನನ್ನು ತಡೆದು ಒದೆಯಿಸಿಕೊಂಡ ಹನುಮಂತ್ರಾಯನ ಕಣಿವೆ. ಮಾದೇಶ್ವರನ ಕಾಲಿಗೆ ಮುಳ್ಳು ಚುಚ್ಚಿ ಆತನ ಕುಂಟುತ್ತಾ ಹೋದ ಕುಂಟನ ಪುರದಳ್ಳ, ತಾಯಿ ಕಟ್ಟಿದ ಉಡುದಾರ ಕಿತ್ತುಹೋದ ಸ್ಥಳ ಉಡ್ದಾರದ ಹಳ್ಳ, ಖುಷಿಗಾರ ಮಾದೇಶ್ವರ ಸುಮಾನ ಬಂದು ನೆಗೆದ ಸ್ಥಳ ಸುಂಡನಕಣಿವೆ, ಮಕಮಲ್ಲಿನಂತೆ ಬೆಳೆದಿದ್ದ ಹಸಿರು ಹುಲ್ಲಿನ ಮೇಲೆ ಉರುಳಿದ ಉಳ್ಡೊರೆಹಳ್ಳ, ತಮ್ಮನ್ನು ಅಗಲಿ ಹೋಗುತ್ತಿದ್ದ ಮಾದೇವನನ್ನು ಹಿಡಿಯಲು ಬಂದ ಶೇಷಣ್ಣ ಮತ್ತು ಬಸವರು ಓಡಿಬಂದ ಮಾರ್ಗಗಳೇ ಬಸವನ ಹಾದಿ ಮತ್ತು ಸರ್ಪನ ಹಾದಿ. ಆನೆತಲೆದಿಂಬಿನ ಬೋರೆ ಹೀಗೆ ಹಲವಾರು ಐತಿಹ್ಯ ಆಧಾರವಾಗಿರುವ ಸ್ಥಳಗಳು ಇವೆ.

ಮೈಸೂರು, ಕೊಳ್ಳೇಗಾಲ, ನೀಲಗಿರಿ, ಕೊಯಮತ್ತೂರು ಮೊದಲಾದ ಕಡೆಗಳಲ್ಲಿ ಹಲವಾರು ಮಾದೇಶ್ವರ ಗದ್ದುಗೆಗಳೂ ಇವೆ. ಈ ಭಾಗದಲ್ಲಿ ಜನರು ತಮ್ಮ ಮನೆಯಲ್ಲಿ ಮಾದಯ್ಯ- ಮಾದಪ್ಪ ಎಂಬ ಹೆಸರುಗಳನ್ನು ಇಟ್ಟಿರುವುದು ಇಂದಿಗೂ ವಾಡಿಕೆಯಾಗಿದೆ. ಸುತ್ತೂರು ಮಠದಲ್ಲಿ ಮಾದೇಶ್ವರ ಗದ್ದುಗೆ ಇದೆ, ಅಲ್ಲಿಯ ಸೋಮೇಶ್ವರ ದೇವಾಲಯದಲ್ಲಿ ಮಾದೇಶ್ವರರು ರಾಗಿ ಬೀಸಿದ ಪವಾಡದ ರಾಗಿಕಲ್ಲು ಇವೆ. "ಹೈದರಾಲಿಯು ಶ್ರೀ ಮಾದೇಶ್ವರ ಸನ್ನಿದಿಗೆ ಶಾಲಿವಾಹನಶಕೆ ೧೬೯೮ನೇ ದುರ್ಮುಖಿ ಸಂವತ್ಸರದ ಶ್ರಾವಣ ಶುದ್ಧ ೨ರಲ್ಲಿ ಬರೆಸಿಕೊಟ್ಟ ತಾಮ್ರ ಶಾಸನದಲ್ಲಿ ಮಾದೇಶ್ವರನನ್ನು ಕುರಿತು "ಶ್ರೀ ಮಹಾ ಜಗದ್ಗುರುವಾದ ಮಾದೇಶ್ವರ ಸ್ವಾಮಿ" ಎಂದು ಭಕ್ತಿಯಿಂದ ಬರೆಸಿದ್ದಾನೆ."[೧]

ಮಾದೇಶ್ವರ ಸಂಹರಿಸಿದ ಶ್ರವಣನ ಬೆಟ್ಟ ಕೊಯಮತ್ತೂರು ಜಿಲ್ಲೆಯ ಸತ್ಯಮಂಗಲಂ ರಸ್ತೆಯಲ್ಲಿರುವ ಗೋಪಿ ತಾಲ್ಲೂಕಿನ ಗೇರ್ಮಾಳದ ಬಳಿ ಇದೆ. ಇಲ್ಲಿ ಶ್ರವಣನು ಚಮ್ಮಾಳಿಗೆ ಮೆಟ್ಟಲು ಹೋಗಿ ಕಾಲುಜಾರಿದ ಹೆಜ್ಜೆಯ ಗುರುತುಗಳು ಆ ಬಂಡೆಯ ಮೇಲೆ ಇವೆ.

೧. ಮಾದೇಶ್ವರ ಸಮೀಕ್ಷೆ; ಹ.ಜ.ಶಿವಶಂಕರಪ್ಪ, ಪುಟ ೨೭೨ ಲೇಖನ – ಮಹಾಮಹಿಮ ಮಾದೇಶ್ವರ – ಡಾ॥ ಸಿದ್ಧಯ್ಯ ಪುರಾಣಿಕ.

ಶ್ರವಣನನ್ನು ನಾಶಮಾಡಿದ ಪಾಪಕ್ಕೆ ಪರಿಹಾರವಾಗಿ ಮಾದೇವ ತಪಸ್ಸು ಮಾಡಿದ ಸ್ಥಳ ತವಸರೆ ಬೆಟ್ಟ, ತಾಳುಬೆಟ್ಟದ ಎದುರುಗಿದೆ. ನಡುಮಲೆಗೆ ಬರುವಾಗ ಈ ಬಂಡೆಯ ಮೇಲೆ ತವಸದ ಕಂಬ ನೆಟ್ಟಿದ್ದನಂತೆ ಅದು ಇಂದಿಗೂ ಇದೆ. ಬೆಟ್ಟಕ್ಕೆ ಬಂದ ಹೆಣ್ಣು-ಗಂಡು ಪರಿಷೆ ಜನರು ಅನೈತಿಕ ಸಂಬಂಧ ಏರ್ಪಟ್ಟರೆ ಅವರನ್ನು ಕುಕ್ಕಿ ತಿನ್ನಲು ಹುಲಿಯನ್ನು ಬಿಡಬೇಕೆಂದು ಕೊಂಗಳ್ಳಿ ಮಲ್ಲಪ್ಪನನ್ನು ಆ ಕಂಬದ ಮೇಲೆ ಕೂರಿಸಿದ್ದಾನೆಂದು ಜನಪದರು ಹೇಳುತ್ತಾರೆ.

ಮಾದೇಶ್ವರ ನಾಗಮಲೆಯಲ್ಲಿ ನೆಲೆಸಿದ್ದಾನೆ ಎನ್ನುತ್ತಾರೆ. ಹುಲಿಯನ್ನು ಸಂಕುಮಲೆಯಲ್ಲಿ ಸಂಕೋಲೆಯಿಂದ ಬಿಗಿದು ಗವಿಯಲ್ಲಿಟ್ಟಿದ್ದಾನೆಂಬ ನಂಬಿಕೆ ಇದೆ. ಆ ಹುಲಿಯನ್ನು ಹೊಡೆದು ಕಟ್ಟಿರುವ ಹೆಜ್ಜೆಯ ಗುರುತು ಬಂಡೆಯ ಮೇಲಿವೆ ಎಂದು ಹೇಳುತ್ತಾರೆ.

**ಜನಪದ ಸಾಹಿತ್ಯದಲ್ಲಿ ಮಾದೇಶ್ವರನ ಕಥೆ**

ಜಗತ್ತಿನ ತಂದೆ-ತಾಯಿಯರಾದ ಪರಮೇಶ್ವರ ಮತ್ತು ಪಾರ್ವತಿ ದೇವಿಯರು ಕೈಲಾಸದಲ್ಲಿ ಮೆರೆಯುತ್ತಿದ್ದರು. ಆ ವೇಳೆಯಲ್ಲಿ ಭೂಲೋಕದಲ್ಲಿ ಬಂಕಾಪುರಿ ಎಂಬ ಪಟ್ಟಣದಲ್ಲಿ ದಿದಿಂಬ ಮತ್ತು ದಿತಿದೇವಿ ಎಂಬ ರಾಕ್ಷಸ ದಂಪತಿಗಳು ರಾಜ್ಯಭಾರ ಮಾಡುತ್ತಿದ್ದರು. ಅವರಿಗೆ ಪುತ್ರ ಸಂತಾನವಿರಲಿಲ್ಲ. ಅವಳಿಗೆ ೬ ಮಂದಿ ಅಕ್ಕ ತಂಗಿಯರಿದ್ದರು. ಅವರೆಲ್ಲರೂ ಪುತ್ರವತಿಯಾದರೂ. ಇವಳಿಗೆ ಮಕ್ಕಳಿಲ್ಲದಿರುವ ಚಿಂತೆ ಕಾಡಿತ್ತು. ಪತಿಯೂ ಈ ಚಿಂತೆಯಲ್ಲಿ ಕೊರಗುತ್ತಿರುವುದನ್ನು ಕಂಡು ದಿತಿದೇವಿಯು ಪತಿಯ ಅಪ್ಪಣೆ ಪಡೆದು ಬ್ರಹ್ಮ ಲೋಕಕ್ಕೆ ಹೋಗಿ ಕೇಳಿದಾಗ ಬ್ರಹ್ಮನು ನಿನಗೆ ಮಕ್ಕಳ ಭಾಗ್ಯವಿಲ್ಲವೆಂದು ತಿಳಿಸಿದನು. ಅಲ್ಲಿಂದ ವೈಕುಂಠಕ್ಕೆ ಹೋಗಿ ಶ್ರೀಮನ್ ನಾರಾಯಣ ಮತ್ತು ಲಕ್ಷ್ಮೀದೇವಿಯರನ್ನು ಕೇಳಿದಾಗ ಅವನ ಬಾಯಿಂದಲೂ ಅದೇ ಉತ್ತರ ಬಂದಿತು. ಇದರಿಂದ ನಿರಾಶೆಯಾಗಿ ಬಂಕಾಪುರಿಗೆ ಹಿಂತಿರುಗಿ ಬಂದು "ನಮ್ಮ ರಾಕ್ಷಸ ವಂಶಕ್ಕೆ ಶಿವನೇ ದೇವರು ಕೈಲಾಸಗಿರಿಗೆ ಹೋಗಿ ಉಗ್ರವಾದ ತಪಸ್ಸನ್ನು ಮಾಡಿ ನನ್ನ ಹಣೆ ಬರಹವನ್ನು ಬದಲಾಯಿಸಿ ಮಕ್ಕಳನ್ನು ಅನುಗ್ರಹಿಸುವಂತೆ ಮಾಡುವೆನು"[೧] ಎಂದಳು. ಕೈಲಾಸದಲ್ಲಿ ದಿತಿದೇವಿಯು ಒಂದು ಗಜ ನಿಂಬೆಹಣ್ಣಿನ ಮೇಲೆ ಒಂಭತ್ತು ಸೂಜಿಗಳನ್ನು ಚುಚ್ಚಿ ತನ್ನ ಪಾದಗಳನ್ನು ಮೇಲ್ಮೊಗ ಮಾಡಿ ಶಿರವನ್ನು ಆ ಸೂಜಿಗಳ ಮೇಲೆ ನಿಲ್ಲಿಸಿ ಆ ಮಹಾಪತಿವ್ರತೆ ತಪಸ್ಸನ್ನು ಮಾಡಿದಳು.

೧. ಮಾದೇಶ್ವರ ಸಮೀಕ್ಷೆ; ಹ.ಜ.ಶಿವಶಂಕರಪ್ಪ, ಪುಟ - ೩೮, ಲೇಖನ - ಜನಪದ ಸಾಹಿತ್ಯದಲ್ಲಿ ಮಾದೇಶ್ವರ.

ಇದರಿಂದ ಪುನೀತಗೊಂಡ ಶಿವನು ಪ್ರತ್ಯಕ್ಷವಾಗಿ ತಪಸ್ಸನ್ನು ನಿಲ್ಲಿಸಿ ನಿನ್ನ ಇಷ್ಟಾರ್ಥವನ್ನು ಕೇಳಿಕೋ ಎಂದು ನುಡಿದನು. ಆ ಸಂದರ್ಭದಲ್ಲಿ ದಿತಿದೇವಿಯು ನನಗೆ ಎಲ್ಲಾ ಐಶ್ವರ್ಯ ನೀಡಿದ್ದೀಯ, ಪುತ್ರಸಂತಾನವನ್ನು ನೀಡು ಎಂದು ಶಿವನ ಪಾದಗಳನ್ನು ತಬ್ಬಿ ಕೇಳಿದಳು. ಆವಾಗ ಶಿವನು ನಿನಗೆ ಇಷ್ಟವಾದ ಎರಡು ವರಗಳನ್ನು ಕೇಳಿಕೋ ಎಂದಾಗ, ಅವಳು ಮೊದಲನೇ ವರದಿಂದ ತನ್ನ ಕೀರ್ತಿ ಪ್ರಪಂಚದಲ್ಲಿ ಬೆಳಗುವಂತಹ ಗಂಡುಮಗನೊಬ್ಬನನ್ನು ಕೊಡಬೇಕೆಂದೂ, ೨ನೇ ವರದಿಂದ ಅವನಿಗೆ ಮರಣಬಾರದಂತಹ ದೀರ್ಘಾಯುಷ್ಯವನ್ನು ಕೊಡಬೇಕೆಂದು ಕೇಳಿಕೊಂಡಾಗ, ಶಿವನು ವರವನ್ನು ನೀಡಿದನು. ಹಾಗೇನಾದರು ಮರಣ ಸಂಭವಿಸಬೇಕಾದರೆ ಮೂರು ಜನ್ಮವೆತ್ತಿ ಬಾಲಬ್ರಹ್ಮಚಾರಿಯಾಗಿ, ಕೈಲಾಸದ ಸುಖಬಿಟ್ಟು ಹೆಣ್ಣು, ಹೊನ್ನು, ಮಣ್ಣುಗಳನ್ನು ಆಶಿಸದೆ ಬಾಲಬ್ರಹ್ಮಚಾರಿಯಾಗಿ ಯಾರು ಬರುವರೋ, ಅವರ ಕೈಯಿಂದ ಮಾತ್ರ ಮರಣ ಸಂಭವಿಸಲಿ ಎಂದು ಕೇಳಿಕೊಳ್ಳುತ್ತಾಳೆ. ಶಿವನು ಅಂತೆಯೇ ಆಗಲೆಂದು ಹೇಳಿದಾಗ ಅವಳು ಬಂಕಾಪುರಿಗೆ ಬಂದಾಗ ಸಂತೋಷಪಟ್ಟ ರಾಜನು ಮತ್ತು ದಿತಿದೇವಿ ಸಂತೋಷದಿಂದ ಬಾಳಿದರು.

ನಂತರ ದಿತಿದೇವಿ ಗರ್ಭವತಿಯಾದಳು. ಒಂದು ಸೋಮವಾರ ಸೂರ್ಯೋದಯದ ಸಮಯದಲ್ಲಿ ಸೂರ್ಯನಂತೆ ಒಬ್ಬ ಮಗನು ಹುಟ್ಟಿದನು. ಅವನೇ ಶ್ರವಣ. ಇವನ ಬಾಲಲೀಲೆಗಳಿಂದ ದಂಪತಿಗಳು ಆನಂದಿಸಿದರು. ಶ್ರವಣನು ೧೨ ವರ್ಷದವನಾಗಿರುವಾಗ ಉಗ್ರ ತಪಸ್ಸನ್ನು ಆಚರಿಸಿ ಶಿವನನ್ನು ಒಲಿಸಿಕೊಂಡು ಶಿವನಿಂದ ವರವನ್ನು ಪಡೆಯುತ್ತಾನೆ. ಆ ವರವೇನೆಂದರೆ ನನಗೆ 'ಮುನ್ನೂರು ಮೂವತ್ತು ಕೋಟಿ ದೇವತೆಗಳು ಸೆರೆಯಾಗಿ ತನ್ನ ಆಜ್ಞೆಗಳನ್ನು ಪಾಲಿಸುವಂತೆ ಆಗಬೇಕು' ಎಂದು ವರ ಪಡೆಯುತ್ತಾನೆ. ಶಿವನು ಅವನ ಮಾತಿಗೆ ವರವನ್ನು ನೀಡುತ್ತಾನೆ. ಈತನು ಕಾಳಿ, ಕಂಕಾಳಿ, ಭದ್ರಕಾಳಿ, ಚಾಮುಂಡಿ ಮುಂತಾದ ಶಕ್ತಿದೇವತೆಗಳನ್ನೂ ಅಷ್ಟದಿಕ್ಪಾಲಕರನ್ನು ಕೈಸೆರೆ ಹಿಡಿದು, ಅವನು ಶ್ರೀ ವಿಷ್ಣುವನ್ನು ಅರಮನೆಯ ಬಾಗಿಲಲ್ಲಿ ಕಾವಲುಗಾರನಾಗಿ ಮಾಡಿಕೊಂಡಿದ್ದನು. ಬ್ರಹ್ಮನು ಅವನಿಗೆ ಪಂಚಾಂಗವನ್ನು ಹೇಳುವ ಜ್ಯೋತಿಷಿಯಾಗಿದ್ದನು, ಸರಸ್ವತಿಯು ಅವನಿಗೆ ಗಾಳಿ ಬೀಸುವ ಸೇವಕಿಯಾಗಿದ್ದಳು. ದೇವೇಂದ್ರನು ಹೊತ್ತೊತ್ತಿಗೆ ಪನ್ನೀರನ್ನು ಹಾಕುತ್ತಿದ್ದನು. ಶನೀಶ್ವರನು ತನ್ನ ಕ್ರೂರ ದೃಷ್ಟಿ ಯಾರ ಮೇಲೂ ಬೀಳಬಾರದೆಂದು ಭೂಮಿಯ ಕಡೆ ಮುಖ ಮಾಡಿ ಮಲಗಿದ್ದನು. ಅಡ್ಡಾಡುವವರೆಲ್ಲಾ ತುಳಿಯುತ್ತಲಿದ್ದರು. ಪಾರ್ವತಿಯು ಶ್ರವಣನ ತೋಟಕ್ಕೆ ನೀರೆರೆಯುತ್ತಿದ್ದಳು ಹಲವಾರು ಗ್ರಾಮದೇವತೆಗಳು, ಮಾರಿಯರು ಸೆರೆಯಾಳಾಗಿದ್ದರು. ಮಾರಿಯರೆಲ್ಲಾ, ಕಸಗುಡಿಸಿ, ರಂಗೋಲಿ ಹಾಕುತ್ತಿದ್ದರು. ಹೀಗೆ

ಒಂದು ದಿನ ಶ್ರವಣನು ಊರ ಹೊರಗಡೆ ಹೋಗಿರುವಂತಹ ಸಂದರ್ಭದಲ್ಲಿ ದೇವತೆಗಳೆಲ್ಲರೂ ರಹಸ್ಯವಾಗಿ ಸಭೆ ಸೇರಿ, ಆ ದುಷ್ಟ ದೊರೆಯ ಬಂಧನದಲ್ಲಿರುವ ಅವರೆಲ್ಲರ ಕಾರ್ಯಗಳು ಜಗತ್ತಿನ ಸೃಷ್ಟಿ ಮತ್ತು ರಕ್ಷಣೆಯ ಬಗ್ಗೆ ಚರ್ಚಿಸಿದರು. ಈಶ್ವರನೇ ಬ್ರಹ್ಮಾಸ್ತ್ರದಿಂದಲೇ ನಾಶ ಮಾಡಬಹುದಲ್ಲಾ ಎಂದು ಹೇಳಿದಾಗ, ನಾನು ವರಕೊಟ್ಟು ನಾನೇ ನಾಶಮಾಡಲು ಸಾಧ್ಯವಿಲ್ಲ ಎಂದು ಹೇಳುತ್ತಾನೆ. ಎಲ್ಲಾ ದೇವತೆಗಳು ನಮ್ಮಿಂದ ಸಾಧ್ಯವಿಲ್ಲವೆಂದಾಗ ಶಿವನಿಂದಲೇ ಸಾಧ್ಯ ಎಂದೂ ಹೇಳಿದಾಗ ಪರಮೇಶ್ವರನಿಗೆ ಅದು ಸರಿಯೆನಿಸಿ, ಆಗ ಅವನು ಭೂಮಿಯಲ್ಲಿ ಮಾನವರೂಪವನ್ನು ತಾಳಿ ಅವನನ್ನು ಸಂಹರಿಸುತ್ತೇನೆ' ಎಂದು ಹೇಳಿ ನನ್ನ ಚಿಚ್ಛಕ್ತಿಯನ್ನು ಹೊರಗೆಡಹಿ ಬೇರೆ ರೂಪತಾಳಿ ನಾಶ ಮಾಡುವುದಾಗಿ ಹೇಳಿದನು. ಇದರಿಂದ ಎಲ್ಲರೂ ತಮ್ಮ ಕೆಲಸದಲ್ಲಿ ನಿರತರಾಗಿರುವಂತೆ ಹೇಳಿ ಕಳುಹಿಸಿದನು. ಶ್ರವಣದೊರೆಗೆ ಅನುಮಾನ ಬರದಂತೆ ತನ್ನ ಒಂದು ರೂಪವನ್ನು ಅಲ್ಲಿಯೇ ಬಿಟ್ಟು ಕೈಲಾಸಕ್ಕೆ ಬಂದನು. ಕೈಲಾಸದಲ್ಲಿ ಯೋಗ ಮಗ್ನನಾಗಿ ಕುಳಿತ ಪರಶಿವನು ತನ್ನ ಆತ್ಮಜ್ಯೋತಿಯನ್ನು ಯೋಗ ಶಕ್ತಿಯಿಂದ ಹೊರಗೆಡಹಿದನು. ಅದು ದಿವ್ಯ ತೇಜಸ್ಸಿನಿಂದ ಕೂಡಿದ ಬಾಲಕನ ರೂಪವನ್ನು ತಾಳಿ ಅವನ ಮುಂದೆ ನಿಂತಿತು. ಶಿವ ಮತ್ತು ಮಗುವಿನ ನಡುವೆ ಸಂಭಾಷಣೆ ನಡೆದು ಶ್ರವಣ ದೊರೆಯ ಸಂಹಾರ ಆಗಬೇಕು ಎಂದಾಗ ಆ ಮಗು ಅವನನ್ನು ಸಂಹರಿಸುವ ರೀತಿ ಹೇಗೆ, ನನ್ನ ತಂದೆ-ತಾಯಿ ಯಾರು? ಎಂದು ಪ್ರಶ್ನಿಸುತ್ತಾನೆ. ಇದರಿಂದ ನನಗೆ ತಂದೆ-ತಾಯಿಯಿಂದ ಹುಟ್ಟಿ, ಗುರುಗಳನ್ನು ಪಡೆದು ನಂತರ ಸಂಹರಿಸಬೇಕು ಎನ್ನುತ್ತಾನೆ.

ನಾನು ಭೂಲೋಕದಲ್ಲಿ ಶಿವಪಾರ್ವತಿಯರನ್ನೇ ತಂದೆ-ತಾಯಿಯಾಗಿ ಪಡೆದುಕೊಂಡು, ಅಲ್ಲಿಯ ಪ್ರಭುವಿನಿಂದ ಜಂಗಮ ದೀಕ್ಷೆ ಮಾಡಿಸಿಕೊಂಡು, ನೀವು ವಹಿಸಿದ ಕಾರ್ಯವೆಲ್ಲವನ್ನು ಮುಗಿಸಿ, ಎಪ್ಪತ್ತೇಳು ಮಲೆ ಕೈಲಾಸದಲ್ಲಿ ಶಾಶ್ವತವಾಗಿ ನೆಲೆಸುವೆನು ಎಂದು ಶಿವನಿಗೆ ಹೇಳುತ್ತಾನೆ.

ಹೀಗೆ ಮಾದೇಶ್ವರನು ಉತ್ತಮಾಪುರದಲ್ಲಿ ಚಂದ್ರಶೇಖರಮೂರ್ತಿ ಮತ್ತು ಉತ್ತರಾಜಮ್ಮ ಎಂಬ ದಂಪತಿಗಳಿಗೆ ಮಗನಾಗಿ ಹುಟ್ಟುತ್ತಾನೆ. ಅವಳ ವ್ರತದಿಂದ ಅವಳ ಹೊಟ್ಟೆಯಲ್ಲಿ ಮರಿದೇವರಾಗಿ ಹುಟ್ಟುತ್ತಾನೆ. ಉತ್ತರಾಜಮ್ಮ ಈತನ ಬಾಲಲೀಲೆಗಳನ್ನು ನೋಡಿದಾಗ ಅವನು ತನ್ನ ಹುಟ್ಟಿನ ರಹಸ್ಯವನ್ನು ತಿಳಿಸುತ್ತಾನೆ. ಇದರಿಂದ ಅವಳ ಎದೆಯಲ್ಲಿ ಹಾಲು ತುಂಬಿ ಬರುತ್ತದೆ. ಅದನ್ನು ಮರಿದೇವರು ಕುಡಿಯಲು ನಿರಾಕರಿಸುತ್ತಾನೆ. ನಿಮ್ಮ ಎದೆಹಾಲಿನಿಂದ ಮೂರು ಬುತ್ತಿಗಳನ್ನು ಕಟ್ಟಿ ಅದನ್ನು ನನ್ನ ಜೋಳಿಗೆಗೆ ಹಾಕಿ ಎಂದು ಹೇಳುತ್ತಾನೆ. ಅದನ್ನು ಉಪಯೋಗಿಸುತ್ತೇನೆ

ಎಂದು ಮರಿ ದೇವರು ಹೇಳಿದನು. ನಾನು ಭೂಲೋಕದಲ್ಲಿ ಅನೇಕ ಕಾರ್ಯಗಳನ್ನು ನೆರವೇರಿಸಬೇಕಿದೆ. ಆ ಕಾರಣದಿಂದ ನಾನು ಏಳು ಮಲೆಯ ಕೈಲಾಸದಲ್ಲಿ ನೆಲೆಸುವೆನು ಆದ್ದರಿಂದ ನನ್ನನ್ನು ಕಳುಹಿಸಿಕೊಡಿ ಎಂದು ಮರಿದೇವರು ಕೇಳಿಕೊಳ್ಳುತ್ತಾನೆ. ನೀನು ಕಾರಣೀಪುರುಷನೆಂದು ನಿನ್ನ ಲೋಕೋದ್ಧಾರ ಕಾರ್ಯಗಳಿಗೆ ಅಡ್ಡಿವುಂಟು ಮಾಡುವವಳು ನಾನಲ್ಲ ಎಂದು ತಾಯಿ ನುಡಿಯುತ್ತಾಳೆ. ನಮಗೆ ನಿನ್ನ ದರ್ಶನ ಮಾಡುವ ಭಾಗ್ಯವನ್ನು ಕರುಣಿಸು ಎಂದಾಗ ನಾನು ನೆಲೆಸುವ ನಡುಮಲೆಯಲ್ಲಿ ನನಗೆ ಕುಳಿತ ಪಟ್ಟ ಮತ್ತು ನಿಮಗೆ ಮೆರವಪಟ್ಟ ನಿಮ್ಮದಾಗುವುದು ಎಂದು ಹೇಳಿ ಬರುತ್ತಾನೆ.

ನಂತರ ಕಲ್ಯಾಣಕ್ಕೆ ಮರಿದೇವರು ಬಂದು ಬಸವಣ್ಣನವರ ಮುಂದೆ ಅನೇಕ ಪಟ್ಟವನ್ನು ಅಲಂಕರಿಸುತ್ತಾನೆ. ಬಸವಣ್ಣನವರ ಮುಂದೆ ಅನೇಕ ಪವಾಡಗಳನ್ನು ಮೆರೆದು ತೋರಿಸುತ್ತಾರೆ. ಜಂಗಮರಿಗೆ ತನ್ನ ಬುತ್ತಿಯನ್ನು ಬಿಚ್ಚಿ, ಬಡಿಸಿ ಅದರಲ್ಲಿ ಪವಾಡ ತೋರಿಸುತ್ತಾರೆ. ಕಲ್ಯಾಣವನ್ನು ಬಿಟ್ಟು ಅವರು ಭೀಮನಕೊಲ್ಲಿಗೆ ಬಂದು, ನಂತರ ಸುತ್ತೂರು ಮಠಕ್ಕೆ ಬಂದು ಅಲ್ಲಿ ಶಿವರಾತ್ರಿ ಗುರುಗಳ ದರ್ಶನ ಪಡೆಯುತ್ತಾರೆ. ಅಲ್ಲಿ ರಾಗಿ ಬೀಸುವ ಪವಾಡ ಮೆರೆದು. ಪ್ರಭು ಸನ್ನಿಧಿಗೆ ಬರುತ್ತಾರೆ. ಇಲ್ಲಿ ಪ್ರಭುದೇವರ ಸೇವೆಯನ್ನು ಮಾಡಿ ಅಲ್ಲಿರುವ ಗೊದ್ದ, ಗೋಸುಂಬೆಗಳನ್ನೇ ಹೂವಾಗಿ ಮಾರ್ಪಡಿಸಿ ಪೂಜೆಗೆ ಸಲ್ಲಿಸುವ ಪವಾಡ ಮೆರೆಯುತ್ತಾರೆ. ಇಲ್ಲಿಂದ ನಂತರ ಎಪ್ಪತ್ತೇಳು ಮಲೆಯ ಪ್ರವಾಸ ಮಾಡುತ್ತಾರೆ. ಇಲ್ಲಿಯ ಪ್ರಭುದೇವರ ಹುಲಿಯನ್ನು ತನ್ನ ವಾಹನವಾಗಿ ಮಾಡಿಕೊಂಡು ಮಾದೇಶ್ವರನು ಬರುವಾಗ ಜನರು ಹೆದರುತ್ತಾರೆಂದು ತಿಳಿದು ಬಯಲಲ್ಲಿ ಬಿಟ್ಟು ನಡೆದು ಹೋಗುತ್ತಾರೆ. ಬೇಡರಕಣ್ಣಯ್ಯ ಮತ್ತು ಕೌದಳ್ಳಿಯಲ್ಲಿ ಸಿಗುವ ಶಂಕಮ್ಮನ ಬಡತನವನ್ನು ನೀಗಿಸುತ್ತಾನೆ. ಅಡ್ಡಲಾಗಿ ಬರುವ ರಂಗಸ್ವಾಮಿಗೆ ಅಲ್ಲೆ ನೆಲೆಸುವಂತೆ ಹೇಳಿ ಅಲ್ಲೆ ಅವನಿಗೆ ಧೂಪ ಸೇವೆ ಮಾಡುವಂತೆ ಹೇಳಿ ಹೊರಡುತ್ತಾನೆ.

ಮಲೆಯ ಮಾದೇಶ್ವರನು ಬೇಡರನ್ನು ಉದ್ಧಾರ ಮಾಡುವ ಪ್ರಸಂಗ ಮತ್ತು ತನ್ನ ಗುಡಿ ಮತ್ತು ಗೋಪುರವನ್ನು ನಿರ್ಮಾಣ ಮಾಡುವುದಕ್ಕೆ ಆಲಂಬಾಡಿಯ ಜುಂಜೇಗೌಡನಿಗೆ ಹೇಳಿ ದೇವಸ್ಥಾನ ನಿರ್ಮಾಣ ಮಾಡಿಸಿಕೊಳ್ಳುವುದು ತನ್ನ ಎಣ್ಣೆ ಮಜ್ಜನದ ಸೇವೆಗೆ ಮೂಗಪ್ಪನನ್ನು ನೇಮಿಸುವ ಪ್ರಸಂಗ, ಬೇವಿನಕಾಳಿಯ ಅಹಂಕಾರವನ್ನು ನಾಶ ಮಾಡುವುದು. ಹಾಗೆಯೇ ಶ್ರವಣನ ಸಂಹರಿಸುವ ಪ್ರಸಂಗ, ನೀಲಯ್ಯನ ಹೆಂಡತಿಯಾದ ಸಂಕಮ್ಮನಿಗೆ ವರಪ್ರಸಾದವನ್ನು ನೀಡಿ ಕಾರಯ್ಯ ಮತ್ತು ಬಿಲ್ಲಯ್ಯನನ್ನು ತನ್ನ ಭಕ್ತರನ್ನಾಗಿ ಮಾಡಿಸಿಕೊಳ್ಳುವ ಪ್ರಸಂಗ. ಹೀಗೆ ಹಲವಾರು

ಜನಪದರು ಹೇಳುವ ರೀತಿಯಲ್ಲಿ ಈ ಮಾದೇಶ್ವರರ ಕಥೆ ಒಂದು ಕಟ್ಟುಕಥೆಯಾಗಿದೆ ಮತ್ತು ಐತಿಹಾಸಿಕವಾಗಿದೆ. ಹಲವಾರು ನಿದರ್ಶನಗಳನ್ನು ಕೂಡ ನಾವು ಇವತ್ತಿಗೂ ಕಾಣುತ್ತೇವೆ. ಇಂದಿಗೂ ಸಹ ಕಂಸಾಳೆಯವರು, ಮಾದೇಶ್ವರನ ದೇವರ ಗುಡ್ಡರು ಇವರೆಲ್ಲಾ ಇವನ ಭಕ್ತರಾಗಿ ಮತ್ತು ಇವನ ಸೇವೆಯನ್ನು ಮಾಡುತ್ತಾ ಜೀವನ ನಡೆಸುತ್ತಿದ್ದಾರೆ.

ಮಲೆಯ ಮಾದೇಶ್ವರ ಕಾವ್ಯ ವಿಸ್ತಾರವಾದ ಕಾವ್ಯವಾಗಿದ್ದು, ಹಲವಾರು ಜನಪದ ಗಾಯಕರು ತಮ್ಮದೇ ಆದ ರೀತಿಯಲ್ಲಿ ಕಥೆಯ ಬೆಳವಣಿಗೆಯನ್ನು ಮಾಡಿರುವುದನ್ನು ಕಾಣುತ್ತೇವೆ. ಒಂದೇ ರೀತಿಯ ಪ್ರಸಂಗಗಳು ಬಂದರೂ ಒಬ್ಬರ ಬಾಯಿಂದ ಇನ್ನೊಬ್ಬರ ಬಾಯಿಗೆ ಹಲವಾರು ಬದಲಾವಣೆಗಳನ್ನು ಕಾಣುತ್ತೇವೆ. ಆದ್ದರಿಂದ ಜನಪದ ಕಾವ್ಯವಾಗಿ ಮಲೆಯ ಮಾದೇಶ್ವರ ಕಾವ್ಯವು ವಿಸ್ತಾರವಾದ ವ್ಯಾಪ್ತಿಯನ್ನು ಒಳಗೊಂಡಿದ್ದು, ಅನೇಕ ಪ್ರಸಂಗಗಳು ಇದರ ಒಳಗೆ ಅಡಕಗೊಂಡಿದೆ. ಇದರಿಂದ ಸಂಕ್ಷಿಪ್ತವಾಗಿ ಈ ಕಥಾಸಾರವನ್ನು ಹೇಳಲು ಬಯಸಿದ್ದೇನೆ.

**ಮಲೆಯ ಮಾದೇಶ್ವರ ಕಾವ್ಯದಲ್ಲಿರುವ ಕೌಟುಂಬಿಕ ವಿಚಾರಗಳು**

**ಮಾದೇಶ್ವರನ ಹುಟ್ಟು**

ಉತ್ತರ ಪ್ರದೇಶದಲ್ಲಿ ಉತ್ತಮಪುರವೆಂಬ ಪಟ್ಟಣದಲ್ಲಿ ಮಹಾಶರಣರಾದ ಕಲ್ಯಾಣಪಟ್ಟಣದ ಬಸವಣ್ಣನ ಜೊತೆಯಲ್ಲಿ ಕನಕದಮಟೆ, ಕಾಳದಮಟೆ, ಭೇರ್ಿ, ನಗಾರಿ ನೌಪತ್ತಿನಲ್ಲಿ, ಆತ್ಮಲಿಂಗ ಪೂಜೆ ಮಾಡಿಕೊಂಡಿದ್ದ ಕಲ್ಯಾಣದೇವರು ೧೨ ವರ್ಷಕ್ಕೆ ಮಹಾಪತಿವ್ರತೆಯಾದ ಉತ್ರಾಜಮ್ಮನನ್ನು ಲಗ್ನ ಆದರಂತೆ, ಆದರೆ ಆ ಮದುವೆಗೆ ಕಲ್ಯಾಣದ ಬಸವಣ್ಣನವರಿಗೆ ಹೇಳಲಿಲ್ಲ. ಒಂದು ತಟ್ಟೆನಾದ್ರೂ ತಕ್ಕಂಡೋಗಿ ಒಪ್ಪಿಸ್ಬೇಕು. ಅಂತ ಕಲ್ಯಾಣದೇವ್ರು ಹೆಂಡತಿಗೆ ಹೇಳಿದರಂತೆ. ಅವರು ಬಂದಾಗ ಅವರು ಯಾಗದಲ್ಲಿ ಮಗ್ನರಾಗಿರುವುದನ್ನು ಕಂಡು, ಇವರಿಗೆ ಭಂಗ ತರಬಾರದೆಂದು ಅವರು ಯಾಗಕ್ಕೆ ಕುಳಿತುಕೊಳ್ಳುತ್ತಾರೆ. ಇದರಿಂದ ಉತ್ತರಾಜಮ್ಮನೂ ಕೂಡ ಉತ್ತಮಪುರವನ್ನು ಮರೆತು ಬಿಟ್ಟರು. ಉತ್ತರಾಜಮ್ಮ ಉತ್ತಮಪುರದಲ್ಲಿ ಮುತ್ತಮ್ಮ ಆದ್ರು. ಕಲ್ಯಾಣದೇವ್ರು ಅಲ್ಲೆ ಮುತ್ತಾದ್ರು. ಇಬ್ಬರು ಒಬ್ಬರನ್ನೊಬ್ಬರು ನೋಡಿಲ್ಲ. ಗಂಡನ ಮುಖ ನೋಡಿಲ್ಲ, ಉತ್ರರಾಜಮ್ಮ ಮರೀದೆ ಪೂಜೆ ಮಾಡ್ಕೊಂಡು ಹೋಯ್ತಿದ್ದಾಳೆ. "ಗಂಡನ ಹಾಸ್ಗೆಯನ್ನೂ ಹೆಂಡ್ತಿ ಹತ್ತಿಲ್ಲ ಹೆಂಡ್ತಿ ಹಾಸ್ಗೆಯನ್ನು ಗಂಡ ಹತ್ತಿಲ್ಲ"[೧] ಇವರು ಉತ್ತಮಾಪುರದಲ್ಲಿ ಉತ್ತರಾಜಮ್ಮ ಪುಟ್ಟಾಮಣಿ ಕೊಳಕ್ಕೆ ಬಂದು ಕರುಳನ್ನು ಕಿತ್ತು ಬೇಲಿ

೧. ಮಲೆಯ ಮಾದೇಶ್ವರ – ಪಿ.ಕೆ.ರಾಜಶೇಖರ, ಪುಟ – ೯೮.

ಮ್ಯಾಲೆ ಒಣಗಾಕಿ ಮತ್ತು ಸ್ನಾನ ಮಡಿ ಮಾಡಿ ದೇಹಕ್ಕೆ ಕರುಳನ್ನು ಸೇರಿಸಿಕೊಳ್ಳುತ್ತಿದ್ದಳು. ಗಂಗೆಯನ್ನು ಗಿಂಡಿಗೆ ತುಂಬಿಕ್ಕೊಂಡು, ಪೂಜೆಗೆ ಕೆಂಡ್ತಾವರೆ ಪುಷ್ಪವನ್ನು ನೋಡ್ತಿದ್ಲಂತೆ ಆವಾಗ ಮಾದೇಶ್ವರ ಇಂತಹ ಪತಿವ್ರತೆ, ಮಹಾಶರಣೆ ಬೇರೆಲ್ಲೂ ಇಲ್ಲಾ ಅಂತ ಹೇಳಿ ಮಾದೇಶ್ವರ ಓಡಿ ಬಂದು ಆ ಪುಷ್ಪದೊಳಗೆ ಸೇರಿಕೊಳ್ಳುತ್ತಾನೆ. ಆ ಪುಷ್ಪ ಆ ಕೊಳವನ್ನೆಲ್ಲಾ ಕಂಗೊಳಿಸುತ್ತಿತ್ತಂತೆ. ಅದನ್ನು ತೆಗೆದುಕೊಂಡೋಗಬೇಕೆಂದು ಉತ್ತರಾಜಮ್ಮ ಹಂತದ ಮೇಲೆ ಬಿಂದಿಗೆ ಇಟ್ಟು, ಹೂವನ್ನು ಕುಯ್ಕೋಬೇಕು ಅಂತ ಮಂಡಿ ಉದ್ದದ ನೀರಿಗೆ ಇಳಿದು ಹೂವಿಗೆ ಕೈಹಾಕಿದಾಗ, ಆ ಹೂವಿನಲ್ಲಿದ್ದ ಮಾದೇವ ಆ ಮೂರು ವರ್ಷದ ಮಗುವಿನಂತೆ ಕಾಣಿಸಿಕೊಳ್ಳುತ್ತಾರೆ. ಇದರಿಂದ, ಮೇಲೆ ಆಸೆ ಬಂದು ಎರಡೂ ಕೈಯನ್ನು ಹಾಕಿದಾಗ ಈಚೆ ದಡದಿಂದ ಆಚೆ ದಡಕ್ಕೆ, ಹೋಯಿತ್ತಂತೆ. ಇದರಿಂದ ನಡುಮಧ್ಯಾಹ್ನವಾಗಿ ಶಿವಪೂಜೆ ತಪ್ಹೋಯಿತಂತೆ, ಶಿವನಧ್ಯಾನ ತಪ್ಪಿತ್ತೆಂದು ದುಃಖದಿಂದ ಅವಳು ಆ ಕೊಳದ ಏರಿಯ ಮ್ಯಾಲೆ ಇದ್ದ ಎಳೆಮಾವಿನ ಮರದಡಿಯಲ್ಲಿ ನಿದ್ರೆಮಾಡುತ್ತಾಳೆ. ಆದರೆ ಅವಳಿಗೆ ನಿದ್ರೆ ಬರುವುದಿಲ್ಲ. ಈ ತಾಯಿಗೆ ನನ್ನ ಮೇಲೆ ಇಷ್ಟವಾಗಿದೆ ಎಂದು ಮಾದೇಶ್ವರನು ಇನಿ ಮಾವಿನ ಹಣ್ಣಾಗಿ ಜನ್ಮಿಸಬೇಕು ಅಂತ ಹೇಳಿ ಅಕಾಲದಲ್ಲಿ ಆ ಮರದಲ್ಲಿ ಹಣ್ಣಾಗಿ ಕಾಣಿಸಿಕೊಳ್ಳುತ್ತದೆ. ಆ ಹಣ್ಣಿನ ವಾಸನೆ ಉತ್ತರಾಜಮ್ಮನಿಗೆ ತಿಳಿದು ಕಣ್ಣು ಬಿಟ್ಟು ನೋಡುತ್ತಾಳೆ. "ಆ ಇನಿಮಾವುನ ಹಣ್ಣು ಮರದ ತುದೀಲದಲ್ಲ ನನ್ನ ದಂಡೇಲಾದ್ರೂ ಬಂದು ಬಿದ್ದಿದ್ದೆ ಆದ್ರೆ ತಿಂದು ಸಂತೋಷ ಪಡ್ತಿದ್ನಲ್ಲ"[೧] ಅಂತ ಹೇಳಿದಾಗ ಆ ಹಣ್ಣು ತೊಟ್ಟು ಮಾಗಿ ಉತ್ತರಾಜಮ್ಮನ ತೊಡೆ ಮೇಲೆ ಬೀಳುತ್ತದೆ. ಇದನ್ನು ಕಣ್ಣು ಮೂಗಿಗೆ ಒತ್ತಿಕೊಂಡು ಅದನ್ನು ಶಿವಪೂಜೆಗೆ ತೆಗೆದುಕೊಂಡು ಹೋಗುತ್ತಾಳೆ. ಆ ಹಣ್ಣನ್ನು ಮಠಕ್ಕೆ ತಂದು ೩ ಭಾಗ ಮಾಡಿ ಒಂದು ಭಾಗವನ್ನು ದೇವರಿಗೆ ಇಡುತ್ತಾಳೆ. ಕಾಳೆ ಕಲ್ಯಾಣದೇವರಿಗೆ ಇನ್ನೊಂದು ಎಡೆ ಇಡುತ್ತಾಳೆ. ಇನ್ನೊಂದನ್ನು ನೈವೇದ್ಯ ಮಾಡಿ ತಾನು ತಿನ್ನುತ್ತಾಳೆ. ಇದೇ ತಕ್ಕಸಮಯವೆಂದು ಮಾದೇವ ಉತ್ರಾಜಮ್ಮನ ಹೊಟ್ಟೆಗೆ ಬರುತ್ತಾನೆ. ಒಂದು ದಿವ್ಸಕ್ಕೆ ಒಂದು ತಿಂಗಳು, ಎರಡು ದಿವಸಕ್ಕೆ ಎರಡು ತಿಂಗಳಾಯಿತು. ಹೀಗೆ ೯ ತಿಂಗಳು ತುಂಬಿತು. ಆ ಮಹಾಪತಿವ್ರತೆಯನ್ನು ಆದಿ ಕಲ್ಯಾಣದಲ್ಲಿ "ಉತ್ರಾಜಮ್ಮನಿಗೆ ಗಂಡನ ಬೋಗವಿಲ್ಲ"[೨] ಅವಳ ಗಂಡ ಯಾವಾಗಲೂ ಕಲ್ಯಾಣದಲ್ಲಿರುತ್ತಾನೆ. ಇವಳು ಕಳ್ಳ ಬಸುರಿ–ಯಾಗಿದ್ದಾಳೆಂದು ಆರೋಪಿಸುತ್ತಾರೆ. ಇದರಿಂದ ಬಸವಣ್ಣನ ಕಿವಿಗೆ ಈ ಮಾತು ಮುಟ್ಟಿದ ತಕ್ಷಣ ಉತ್ರಾಜಮ್ಮನನ್ನು ಕಲ್ಯಾಣಕ್ಕೆ ಬರಬೇಡ ಎಂದು ಹೇಳುತ್ತಾರೆ. ಆವಾಗ

---

೧. ಮಲೆಯ ಮಾದೇಶ್ವರ – ಪಿ.ಕೆ.ರಾಜಶೇಖರ, ಪುಟ – ೯೯.

೨. ಅದೇ, ಪುಟ – ೯೯.

ಅವಳ ಪತಿವ್ರತ ಧರ್ಮವನ್ನು ಪರೀಕ್ಷಿಸಲು ವಾಮಗೊಂಡವನ್ನು ಹಾಕಿಸುತ್ತಾರೆ. ಇದರಿಂದ ಅವಳು ಶಿವನ ಧ್ಯಾನದಿಂದ ವಾಮಗೊಂಡವನ್ನು ಹಾಯುತ್ತಾಳೆ. ಬಿಜ್ಜಳ ರಾಜನು ಆ ಉತ್ರಾಜಮ್ಮನನ್ನು ನ್ಯಾಯದ ಕಟ್ಟೆಗೆ ಬರುವಂತೆ ಆಜ್ಞೆ ಮಾಡಿದಾಗ ೯೦ ವರ್ಷದ ಮುದುಕಿ ನ್ಯಾಯದ ಕಟ್ಟೆಗೆ ಬರುತ್ತಾಳೆ. ಇದರಿಂದ ಬೇಸತ್ತ ಬಿಜ್ಜಳನು ಅವಳನ್ನು ಪಲ್ಲಕಿಯಲ್ಲಿ ಮೆರವಣಿಗೆ ಮಾಡಿಸುತ್ತಾನೆ. ಮತ್ತೆ ಮಠಕ್ಕೆ ಬಂದು ಗಂಧದ ಕರಡ್ಗೆ ತಗ್ದು ಹಾಕೊಂಡಾಗ ಅವರ ಒಳಗೆ ಮಾದೇವ ಮಲಗಿರುವುದನ್ನು ಕಂಡುಬರುತ್ತದೆ. ಇದನ್ನು ಪರೀಕ್ಷೆ ಮಾಡ್ಬೇಕು ಅನ್ನುತ್ತಾನೆ. ಉತ್ರಾಜಮ್ಮ ನಾನು ಒಬ್ಳೆ ಪರೀಕ್ಷೆ ಮಾಡೋದಲ್ಲ ಅಂತ್ಹೇಳುತ್ತಾಳೆ. ಇದರಿಂದ ಆತನ ಗಂಡನು ಕೂಡ ನಂಬುವುದಿಲ್ಲ, ಎಲಾ ಮಡದಿ ಉತ್ರಾಜಿ ಯಾರಾದ್ರೂ ಈ ಮಾತ ಮೆಚ್ತಾರ? ಮೋಡ ಕಟ್ಟದೆ ಎಂದೂ ಮಳೆ ಹುಯ್ಯಕ್ಕಿಲ್ಲ, ಬೀಜ ಬಿತ್ತದೆ ಎಲ್ಲಾರೂ ಬೆಳಸಾಯ್ತದ? ಎಂದು ಹೇಳುತ್ತಾನೆ. ಇದರಿಂದ ದುಃಖಿತಳಾದ ಆ ತಾಯಿ ಶೋಕವನ್ನು ಸಹಿಸಲಾರದ ಮಾದೇವ ಗರ್ಭದಿಂದಲೇ ಮಾತನಾಡುತ್ತಾನೆ. ಅಲ್ಲಿಗೆ ಕಲ್ಯಾಣ ದೇವರು ಬಸವಣ್ಣ ಮತ್ತು ಅಲ್ಲಿಗೆ ಪ್ರಭುದೇವರನ್ನು ಕರೆಯಿಸುತ್ತಾರೆ. ಆಗ ಉತ್ರಾಜಮ್ಮ ಗಂಧದ ಕರಡ್ಗೆ ಕೊಡುತ್ತಾಳೆ ಅದನ್ನು ನೋಡಿ ಪ್ರಭುದೇವರು 'ಮಾಯದ ಮಗ' ನಿನ್ನ ಹೊಟ್ಟೇಲಿ ಹುಟ್ಟುತ್ತಾನೆ. "ಇವನು ಮಾಯ್ಕಾರ ಮಾದೇಶ್ವರ ಮಾಯದ್ದೇವ"[೧] ಅಂತೇಳುತ್ತಾರೆ. ಇವತ್ತು ಭಾನುವಾರ, ಸೋಮವಾರ ಈ ಪ್ರಪಂಚಕ್ಕೆ ಬರುತ್ತೀನಿ, ನೀನು ಮನೆ, ಕೋಣೆ ಎಲ್ಲವನ್ನು ತಾರ್ಸಿರಬೇಕು, ರಂಗೋಲೆಯಿಂದ ಸಿಂಗರಿಸಬೇಕು ಎಂದು ಹೇಳುತ್ತಾನೆ. ಅವನ ಇಚ್ಛೆಯಂತೆ ಎಲ್ಲವನ್ನು ಸಿಂಗರಿಸಿದಾಗ ಭೂಮಿಗೆ ಬರಬೇಕಾದರೆ ಮಾದೇಶ್ವರ ಈ ಕೆಳಗಿನ ರೀತಿಯಲ್ಲಿ ಹೇಳುತ್ತಾರೆ.

"ನಿನ್ನ ಗರುಬವನ್ನು ನಾನು ಸೇರಿದ್ದೀನಿ
ನಿನ್ನ ರುದಯದಲ್ಲಿ ಜಲ್ಮುಸ್ತಿದ್ದೀನಿ ತಾಯಿ
ಈ ಪ್ರಪಂಚಕ್ಕೆ ನಾನು ಬಂದು
ಮುಂದೆ ಗಂಡುಗಾಳಿ ಗುಂಡ್ಗೆ ಸೀಳಬೇಕು
ಹಿಂಡುಗಾಳಿ ಸಿರ ಹರಿಬೇಕು
ಇಸ ಇಕ್ಕಿದೋರ ಮನೆಗಳ ಸಿಸುಗಳ ಕೊಲ್ಬೇಕು
ಮದ್ದೀಕಿದ್ದೋರ ಮನೆಯ ಮದ್ದಾನ್ಕೆ ಮುರಿಬೇಕು
ಆಂಕಾರ ಪಟ್ಟೋರ ಮನೆಯ ಎಕ್ಕುಟ್ಟುಸ್ಬೇಕು
ನಂಬುದೋರ ಮನೇಲಿ ತುಂಬಿ ತುಳಕಾಡಬೇಕು

---

೧. ಮಲೆಯ ಮಾದೇಶ್ವರ – ಪಿ.ಕೆ.ರಾಜಶೇಖರ, ಪುಟ ೧೧೦.

ಮರುತವರ ಮನೆಯ ಮುರಿಬೇಕು
ಹೊತ್ತಾಯ್ತು ಬತ್ತವ್ವ
ನಂಗೆದಾರಿ ತೋರು"[೧] ಅಂದಿದ್ದಾರೆ ಮಾದೇವ.

ಈ ಮೇಲಿನ ಮಾತನ್ನು ಮಾದೇಶ್ವರ ಹೇಳಿದಾಗ ನನಗೆ ದಾರಿ ತೋರವ್ವ ಎಂದಾಗ ನಿನಗೆ ಇಚ್ಛೆ ಬಂದ ದಾರಿಯಲ್ಲಿ ಬಾ ಎಂದಾಗ ಮಾದೇಶ್ವರ ಈ ರೀತಿ ಹೇಳುತ್ತಾರೆ. ನಾನು ಕಿವಿ, ಮೂಗು, ಬಾಯಿ, ಕಣ್ಣಲ್ಲಿ ಹುಟ್ಟಲಾರೆ ನನಗೆ ಅಪಕೀರ್ತಿ ಬರುತ್ತದೆಂದು ಉತ್ರಾಜಮ್ಮನ ಬೆನ್ನ ಕಡೆಯಿಂದ ಹುಟ್ಟುತ್ತಾನೆ. ಈ ರೀತಿ ಬೆನ್ನಿನಿಂದ ಹುಟ್ಟಿದ ಮಗುವನ್ನು ಬಾಳೆ ಎಲೆಯ ಮೇಲೆ ಮಲಗಿಸಿದ್ದಾರೆ. ಕಣ್ಣನ್ನು ಮುಚ್ಚಿದ್ದಾನೆ, ಇಲ್ಲಿ ಈವತ್ತಿನಂತೆ ಆವತ್ತು ಕೂಡ ಮನೆಯಲ್ಲೆ ಸೂಲಗಿತ್ತಿಯರಿಂದಲೇ ಹೆರಿಗೆ ಮಾಡಿಸುವ ಪದ್ಧತಿ ಇತ್ತೆಂದು ಕಾಣುತ್ತದೆ. ಅದೇ ರೀತಿ ಮಾದೇಶ್ವರ ಹುಟ್ಟು ಸಂಭವಿಸಿರಬಹುದು. ಆದರೆ ಜನಪದರು ಒಬ್ಬ ಪವಾಡ ಪುರುಷನ ಹುಟ್ಟಿನ ಬಗ್ಗೆ ಹಲವಾರು ಕಟ್ಟು ಕಥೆಗಳನ್ನು ಹೆಣದಿರುವಂತೆ ಕಂಡುಬರುತ್ತದೆ.

ಹುಟ್ಟಿದಂತಹ ಮಗುವನ್ನು ನೋಡಿ ಆ ಮಗುವಿನ ಜನ್ಮದಿಂದ ಅವಳ ಪತಿವ್ರತಾ ಧರ್ಮಕ್ಕೆ ಕುಂದುಬರುತ್ತದೆ ಎಂಬುದು ಉತ್ರಾಜಮ್ಮನ ನಂಬಿಕೆ. ಆದರೆ ಈವತ್ತಿಗೂ ಸಹ ನಮ್ಮ ಸಮಾಜದಲ್ಲಿ ಈ ರೀತಿಯ ಅನೈತಿಕ ಸಂಬಂಧದಿಂದ ಅಥವಾ ಗಂಡನಿಲ್ಲದೆ ಗರ್ಭವತಿಯಾದರೆ ನಿಂದಿಸುವುದು ಈ ಸಮಾಜದಲ್ಲಿ ವಾಸ್ತವವಾದ ಸಂಗತಿಯಾಗಿದೆ. ಜನಪದ ಕಾವ್ಯದಲ್ಲಿಯೂ ಕೂಡ ಈ ರೀತಿಯ ಸಂಪ್ರದಾಯ ವ್ಯವಸ್ಥೆ ಇದೆ ಎಂಬುದನ್ನು ಮನಗಾಣಬಹುದಾಗಿದೆ. ಅದರಂತೆ ಮಾದೇಶ್ವರರ ಹುಟ್ಟು ಕೂಡ ನಿಗೂಢವಾದ ಸತ್ಯವಾಗಿದೆ. ಅಂದರೆ ಜನಪದರು ಬಾಯಿಂದ ಬಾಯಿಗೆ ಹೇಳುವಾಗ ಕೆಲವು ಸನ್ನಿವೇಶಗಳನ್ನು, ಕಥೆಗಳನ್ನು ತಮ್ಮ ಅನುಭವಕ್ಕೆ ಬಂದಂತೆ ಹೇಳಿರುವುದು ಸತ್ಯವಾಗಿದೆ. ಅದೇ ರೀತಿ ಒಬ್ಬ ಪವಾಡ ಪುರುಷನ ಹುಟ್ಟಿನ ಬಗ್ಗೆಯೂ ಕೂಡ ಈ ರೀತಿಯ ಒಂದು ಕಥೆಯನ್ನು ಸೃಷ್ಟಿಸಿ ಹೇಳಿರಬಹುದಾಗಿದೆ. ಮಾದೇಶ್ವರನು ಸಹ ಒಬ್ಬ ಮಾನವನೇ ಅವನ ಹುಟ್ಟು ಕೂಡ ಮಾನವರ ಸಹಜ ಹುಟ್ಟಿನಂತೆಯೇ ಸಂಭವಿಸಿರಬಹುದೆಂದು ನನ್ನ ಅಭಿಪ್ರಾಯವಾಗಿದೆ.

**ಈರೇಗೌಡನ ಕುಟುಂಬ ವ್ಯವಸ್ಥೆ**

ಮಲೆಯ ಮಾದೇಶ್ವರ ಉತ್ರಾಜಮ್ಮ ಮತ್ತು ಕಲ್ಯಾಣದೇವರನ್ನು ತಂದೆ-ತಾಯಿಯಾಗಿ ಪಡೆದುಕೊಂಡೆ. ಆದರೆ ತಕ್ಕಾದ ಒಕ್ಕಲು ಪಡಿಬೇಕು ಅಂತ, ತನಗೆ ತಕ್ಕ ಶಿಷ್ಯನನ್ನು ಪಡಿಬೇಕು ಅಂತ ಹೇಳಿ, ಔರಂಗಾಬಾದು, ರಂಜಕಲ್ಲು, ಕೊಡಗು,

---

೧. ಮಲೆಯ ಮಾದೇಶ್ವರ – ಪಿ.ಕೆ.ರಾಜಶೇಖರ, ಪುಟ ೧೧೦.

ಕೊಂಗುದೇಶ, ಮಲೆಯಾಳ ತಿರುಗಿ ಪಿರಿಯಾಪಟ್ಟಣಕ್ಕೆ ಬಂದಾಗ, ಆ ಊರಿನ ಹೆಬ್ಬಾಗಿಲಲ್ಲಿ ಕುಳಿತು ಹಸಿವಿನಿಂದ ನೋಡುತ್ತಾರೆ. ಅಲ್ಲಿ ಕಕ್ಕೆ ಮರದಡಿಯಲ್ಲಿ ಕನ್ನಂಬಾಡಿ ಕಾಳಮ್ಮ ಕುಳಿರುವುದನ್ನು ಕಾಣುತ್ತಾರೆ. ಅವಳು ಮಾದೇಶ್ವರನನ್ನು ವಿಚಾರಿಸಿ ನಂತರ ಮಾದೇಶ್ವರನ ಹಸಿವನ್ನು ನೀಗಿಸುತ್ತಾಳೆ. ಅವರಿಗೆ ಅವರೆ ಸ್ವಾಡಿಗೆ (ಹಸಿಕಾಳು) ತಿನ್ನೋಕೆ ಕೊಟ್ಟು ಹಸುವು ನೀಗಿಸಿದಾಗ ಮಾದೇಶ್ವರ ನಿನಗೆ ಕಾಳಮ್ಮ ಅನ್ನೋ ಹೆಸರು ಶಾಶ್ವತವಾಗಿರಲಿ ಎಂದು ಹೇಳುತ್ತಾರೆ.

ಈ ಪಿರಿಯಾಪಟ್ಟಣದ ವಾತಾವರಣ ತುಂಬಾ ಇಷ್ಟವಾಗಿ ಮಾದೇಶ್ವರ ತಪಸ್ಸಿಗೆ ಕುಳಿತಾಗ ಅವರ ಮೈಮೇಲೆ ಹುತ್ತ ಬೆಳೆಯುತ್ತದೆ. ಆ ಪಿರಿಯಾಪಟ್ಟಣದಲ್ಲಿ ಅತ್ಯಂತ ಶ್ರೀಮಂತನಾಗಿದ್ದವನು ಈರೇಗೌಡ ಎಂಬುವವನು. ಈತನು ೭ ಹಟ್ಟಿಗಳನ್ನು ಕಟ್ಟಿದ್ದಾನೆ, ಏಳು ಹಟ್ಟಿ ದನಕರುಗಳನ್ನೂ, ಕುರಿಗಳನ್ನೂ ಸಾಕಿದ್ದಾನೆ, ಬೆಳಿಗ್ಗೆ ಎದ್ದು ಈತ ಏಳು ಜೊತೆ ಏರುಗಳನ್ನು ಕಟ್ಟಿಕೊಂಡು ಜೀತಗಾರರ ಜೊತೆ ಕೈಯಲ್ಲಿ ದೊಣ್ಣೆ ಹಿಡಿದು ಆ ಹುತ್ತದ ಕಡೆಗೆ ದನವ ಮೇಯ್ಸಲಿಕ್ಕೆ ಹೋದಾಗ, ಅಲ್ಲಿದ್ದ ಜಲಗೊಂಬಿನ ಹಸುವೊಂದು ಆ ಹುತ್ತಕ್ಕೆ ಹೋಗಿ ಹಾಲನ್ನು ಹಿಂಡಿ ಬರುತ್ತಿತ್ತಂತೆ, ಮನೆಗೆ ಬಂದ ಹಸುವಿನಲ್ಲಿ ಈರಯ್ಯನ ಮಡದಿ ಕೆಂಪಮ್ಮ ತಾಮ್ರದ ಚೆಂಬನ್ನು ತೆಗೆದು ಹಾಲನ್ನು ಕರೆದಾಗ ರಕ್ತ ಸುರಿಯುತ್ತದೆ. ಈರಯ್ಯನ ಮಡದಿ ಇದರಿಂದ ಭಯಗೊಂಡು ಈ ರೀತಿ ಆಗಿದ್ದು ಇದೇ ಮೊದ್ಲು ಅಂಥಾ ಹೇಳ್ಬೇಕು ಅಂದು ಅವಳು ಈ ರೀತಿ ಮಾತನ್ನು ಹೇಳುತ್ತಾಳೆ.

"ಅಹ್ಹಾ ಇಷ್ಟು ಜಿವ್ಸ ಹಸಾ ಒಂದು ಹಾಲ್ ಹಿಂಡ್ತಿತ್ತು
ಇಂದು ತುಂಬುದ ಸೋಮಾರ ರಕ್ತವನ್ನು ಹಿಂಡುತ್ತೈತಲ್ಲ
ಏನು ಸಮಾಚಾರವೋ ಕಾಣೆ ಗೊತ್ತಿಲ್ಲ
ಪತಿಕೂಡ ತಿಳಿಸ್ಬೇಕು ಅಂತ ಒಂದು
ಪತೀ ಪಾದುಕ್ಕೆ ನಮಸ್ಕಾರ ಮಾಡಿದಳು
ಈರೇಗೌಡ ಎದ್ದು ಕೂತ್ಕೊಂಡುನೆಂ
ಎಲಾ ಮಡುದಿ ಏನ್ ಸಮಾಚಾರ ಯಾತಕ್ಕೆ ಬಂದೆ?
"ಸ್ವಾಮಿ ಮನೇಲಿ ಕಟ್ಟಿರುವಂತೆ ಜಲಗೊಂಬಿನಸ
ಹಾಲುಗೆ ಬದಲಾಗಿ ರಕ್ತ ಕರಿತೀದೆ ಸ್ವಾಮಿ"[೧]

---

೧. ಮಲೆಯ ಮಾದೇಶ್ವರ – ಪಿ.ಕೆ.ರಾಜಶೇಖರ, ಪುಟ ೧೬೪.

ಈ ರೀತಿಯಾಗಿ ಹೆಂಡತಿ ಹೇಳಿದ ಮಾತನ್ನು ಕೇಳಿ ಈರೇಗೌಡ ಆ ಹಸುವನ್ನು ಮಡಗಕಾಗ್ದು ಎಂದು ಹೇಳಿ, ಆ ಹಸುವನ್ನು ಕತ್ರಸಾಕಬೇಕು ಅಂತ ಜೀತಗಾರನನ್ನು ಕರೆದುಕೊಂಡು ಕಾಡಿಗೆ ಹೋಗುತ್ತಾನೆ. ಆ ಜಲಗೊಂಬಿನ ಹಸು ದನಗಳ ಗುಂಪನ್ನು ಬಿಟ್ಟು ಓಡಿ ಬಂದು ಹೊನ್ನು ಹುತ್ತದ ಮೇಲೆ ಜೊರ್ರೆಂದು ಹಾಲನ್ನು ಹಿಂಡುತ್ತದೆ. ಇದನ್ನು ನೋಡಿದಂತಹ ಈರೇಗೌಡ ನನ್ನ ಮನೇಲಿ ರಕ್ತ ಕರೀತಾದೆ, ಇಲ್ಲಿ ಹಾಲನ್ನು ಕರೆಯುತ್ತದೆ ಎಂದು ಭಾವಿಸಿ ಬೀಸುಮಚ್ಚು ಮತ್ತು ಬೀಸುಗೊಳ್ಳಿಯನ್ನು ತಕ್ಕೊಂಡು ಕತ್ರಾಸಕಬೇಕು ಅಂತ ಬೀಸಿ ಹಸುವಿಗೆ ಹೊಡೆಯುತ್ತಾನೆ. ಹಸು ತಪ್ಪಿಸಿಕೊಂಡು ಓಡುತ್ತದೆ. ಆ ಬೀಸುಮಚ್ಚು ಹೊನುತ್ತಕ್ಕೆ ಬಿದ್ದು ಹುತ್ತದಲ್ಲಿ ಇದ್ದ ಮಾದೇವನ ತಲೆಗೆ ಬಿದ್ದು ರಕ್ತ ಚಿಮ್ಮುತ್ತದೆ. ಈ ಆಶ್ಚರ್ಯವನ್ನು ನೋಡಿ ಈರೇಗೌಡ ಗಾಬರಿಗೊಳ್ಳುತ್ತಾನೆ. ಅಲ್ಲೆ ಜೀತಗಾರನ ಮೈಮೇಲೆ ಮಾದೇವ ಬಂದು ದೀಪಾವಳಿ ಪೂಜೆಗೆ ಬಂದು ಕೊಂಡವನ್ನು ಮಾಡಬೇಕು ಅಂತ ಹೇಳಿಸುತ್ತಾನೆ. ಕತ್ತರಿಸಬೇಕೆಂದರೆ ಈ ನನ್ನ ಶಿಶು ಮಗನನ್ನು ಕತ್ತರಿಸಿ ಹಾಕು ಎಂದು ಹೇಳಿದಾಗ "ಈರಯ್ಯ ಸ್ವಾಮಿ ನೀವ್ಯಾರೋ ನನಗೆ ಗೊತ್ತಾಗ್ನಿಲ್ಲ ಸರ್ವಾಪ್ರಾದವಾಯಿತು ಬುದ್ಧಿ"[೧] ಅಂತ್ಹೇಳಿ ಕರವೆತ್ತಿ ಕೈಮುಗಿಯುತ್ತಾನೆ.

ಇದರಿಂದ ಮಾದೇವ ಈರೇಗೌಡನಿಗೆ ನೀನು ನನ್ನ ಒಕ್ಕಲಾಗಬೇಕು ನನಗೆ ಇಲ್ಲೊಂದು ಗುಡಿಯನ್ನು ಕಟ್ಟಿಸುವಂತವನಾಗು ಮತ್ತು ದೀಪಾವಳಿ ವೇಳೆಗೆ ಕೊಂಡೋತ್ಸವವನ್ನು ಹಾಕಿಸು. ಆ ಹಸುವಿನಲ್ಲಿ ಹುಟ್ಟಿದ ಕರುವನ್ನು ನನ್ನ ಹೆಸರಿನಲ್ಲಿ ಬಸವನ ಬಿಡು ಎಂದು ಹೇಳುತ್ತಾನೆ. ಮಾದೇಶ್ವರನ ಮಾತನ್ನು ಕೇಳಿದ ಈರೇಗೌಡ ಅದೇ ರೀತಿ ಮಾಡುತ್ತಾನೆ. ಬಸವನನ್ನು ಮಾದೇವನಿಗೆ ಬಿಡುತ್ತಾನೆ. ಇದರಿಂದ ಬಸವ ಬೆಳೆದಂತೆ ಈರೇಗೌಡನ ಮನೆಯು ಅಭಿವೃದ್ಧಿ ಹೊಂದುತ್ತದೆ. ಒಂದು ದಿನ ಈ ಬಸವ ಪೀರ್‌ಖಾನ್ ಸಾಬಿ ಕಣ್ಣಿಗೆ ಬೀಳುತ್ತದೆ. ಇದನ್ನು ಬಂದೂಕಿನಿಂದ ಹೊಡೆದು ಸಾಯಿಸಿ ನೂರೊಂದು ಪಾಲು ಮಾಡುತ್ತಾನೆ. ಇದನ್ನು ನೋಡಿದ ಮಾದೇಶ್ವರ ತನ್ನ ದಿವ್ಯ ದೃಷ್ಟಿಯಿಂದ ನೂರೊಂದೂ ಲಿಂಗವಾಗುವಂತೆ ಮಾಡುತ್ತಾನೆ. ಚೆಲ್ಲಿದಂತ ರಕ್ತವೆಲ್ಲಾ ಕೆಂಪು ಕಲ್ಲಾಗುತ್ತವೆ. ಫೀರ್‌ಖಾನ್ ಸಾಬಿಗೆ ನನ್ನ ಬಸವನ ಕೊಂದೀಯಲ್ಲ ನೀನು ಶಿರವನ್ನು ಭೂಮಿಗಾಕ್ಕೊಂಡು ಪಾದ ಮೇಲಾಕ್ಕಾಗಿ ಗೋಗಲ್ಲಾಗು" ಎಂದು ಶಾಪಕೊಡುತ್ತಾರೆ. ನೂರೊಂದು ಲಿಂಗಗಳಿಗೆ ದೀಪಾವಳಿ ವೇಳೆಗೆ ಜಾತ್ರೆ ಆಗ್ಲಿ, ಕೊಂಡ ಮಾಡ್ಲಿ, ಹಾಲರವಿ, ಎಣ್ಣೆ ಮಜ್ಜಣ ಸೇವೆ ಆಗ್ಲಿ ಎಂದು ಹೇಳುತ್ತಾರೆ. ಪಿರಿಯಾಪಟ್ಟಣದಲ್ಲಿ ಹೀಗೆ ತನ್ನ ಒಕ್ಕಲನ್ನು ಪಡೆದು, ದೇವಸ್ಥಾನವನ್ನು

೧. ಮಲೆಯ ಮಾದೇಶ್ವರ – (ನೂರೊಂದಯ್ಯನ ಕವಟ್ಲು).

ಕಟ್ಟಿಸಿಕೊಳ್ಳುತ್ತಾರೆ. ಈ ದೇವಸ್ಥಾನದಲ್ಲಿ ನೂರೊಂದಯ್ಯ ಎಂಬ ಹೆಸರನ್ನು ಪಡೆದುಕೊಂಡು ಅಲ್ಲೇ ನೆಲೆಸಿದ್ದಾರೆ.

**ಬಸವನಹಳ್ಳಿ ದನಕಾಯುವ ಹುಡುಗರ ಜೊತೆ ಆಟವಾಡಿದ್ದು**

ಬಸವನಹಳ್ಳಿಯಲ್ಲಿ ದನಕುರಿಯನ್ನು ಬಿಟ್ಟು ಆ ಹುಡುಗರು ಗೋಲಿ, ಗೆಜ್ಜುಗಗಳನ್ನು ಆಡುತ್ತಿದ್ದರು. ಈ ಊರು ನನಗೆ ತುಂಬಾ ಇಷ್ಟವಾಗೈತೆ ಒಂದು ಕಾಸುನ ಧೂಪ ತಕ್ಕೋಳ್ಬೇಕಲ್ಲ ಏನ್ ಮಾಡ್ಲಿ ಅಂತ ಹೇಳಿ, ಆ ಹುಡುಗರ ಬಳಿಗೆ ಬಂದು ನಾನು ನಿಮ್ಮ ಜೊತೆಗೆ ಆಟ ಆಡ್ಬೇಕು ಎಂದು ಮಾದೇಶ್ವರ ಕೇಳುತ್ತಾರೆ. ನೀನು ಯಾರು? ಎಂದು ಹುಡುಗರು ಕೇಳಿದಾಗ ನಾನು ಉತ್ತರದೇಶ ಉತ್ತಮಪುರದ ಮಾದೇವ ಎನ್ನುತ್ತಾರೆ. ನನಗೆ ಬೇಸರವಾಗಿದೆ ಆದ್ದರಿಂದ ನಿಮ್ಮ ಜೊತೆ ಗೋಲಿ ಗೆಜ್ಗ ಆಡ್ಬೇಕು ಅಂತ ಹೇಳುತ್ತಾರೆ. ಅವರ ಜೊತೆ ಆಟಕ್ಕಿಳಿದು ಗೋಲಿ ಮತ್ತು ಗೆಜ್ಗಗಳನ್ನು ಹುಡುಗ್ರಿಂದ ಗೆದ್ದುಕೊಳ್ಳುತ್ತಾರೆ. ಆ ಹುಡುಗರಲ್ಲಿ ಒಬ್ಬ ಹುಡುಗ ನನ್ನ ಗೋಲಿ ಕೊಡು ಎಂದು ಕೇಳಿದಾಗ, ಮಾದೇಶ್ವರ ಕೊಡುವುದಿಲ್ಲ. ಹುಡುಗರೆಲ್ಲರೂ ಮಾದೇಶ್ವರನ ಮೇಲೆ ಜಗಳಕ್ಕೆ ಬಂದು ಒಡಿತಾರೆ, ಮಾದೇಶ್ವರನಿಗೆ ಕೋಪ ಬಂದು ಕಿಡುಗಣ್ಣಿನಿಂದ ಅವರಿಗೆ ಉರಿಯನ್ನು ಬಿಟ್ಟಾಗ, ಆ ಹುಡುಗರು ಓಡಿಬಿಡುತ್ತಾರೆ. ಇದನ್ನು ಬಸವನಹಳ್ಳಿಯ ಬಸವೇಗೌಡನ ಹೆಂಡತಿ ಬಸಮ್ಮ ತನ್ನ ಪತಿಗೆ ಊಟ ಕೊಟ್ಟು ಪುಟ್ಟಿ ತೆಗೆದುಕೊಂಡು ಬರುವಾಗ ಈ ಮಕ್ಕಳ ಓಟವನ್ನು ನೋಡಿ ವಿಚಾರಿಸುತ್ತಾಳೆ. ಮಾದೇವ ತನ್ನ ಮಾಯಾವಿತನದಿಂದ ತಾನೇ ಅಳುತ್ತಾ ಆ ಬಸಮ್ಮನಿಂದ ಅನುಕಂಪವನ್ನು ತೋರಿಸಿಕೊಳ್ಳುತ್ತಾನೆ. ತನ್ನ ವಿಳಾಸವನ್ನು ಬಸಮ್ಮನಿಗೆ ತಿಳಿಸುತ್ತಾನೆ. ನನಗೆ ತಂದೆ–ತಾಯಿ ಇಲ್ಲ ತಬ್ಬಲಿ ನಾನು ಅಂತ ಹೇಳುತ್ತಾನೆ. ಬಸಮ್ಮನಿಗೂ ಮಕ್ಕಳಿಲ್ಲದಿರುವ ಕಾರಣ ಇವನನ್ನು ಸಾಕಿಕೊಳ್ಳಲು ಒಪ್ಪುತ್ತಾಳೆ. ಮಾದೇವ ಅವರ ಮನೇಲಿ ಇರುತ್ತಾನೆ. ಅವನಿಗೆ ಉಪಚಾರವನ್ನು ಮಾಡುತ್ತಾಳೆ. ಒಂದು ದಿನ ಅವಳ ಮನೆಯಲ್ಲಿ ಅಡಿಗೆ ಮಾಡಲು ಸೌದೆ ಇರುವುದಿಲ್ಲ. ನಿಮ್ಮ ತಂದೆಗೆ ಅಡಿಗೆ ಮಾಡಿ ಹೊಲಕ್ಕೆ ಊಟ ತಕ್ಕೊಂಡೋಗಬೇಕು ಅಂತ ಹೇಳಿದಾಗ, ಮಾದೇಶ್ವರ ಕಾಡಲ್ಲಿರುವ ಹಾವುಗಳನ್ನು ಕರೆದು ಸೌದೆ ಹೊರೆಯಾಗಿ ನಿರ್ಮಿಸುತ್ತಾರೆ, ಅದನ್ನು ಹೊತ್ತಿಕೊಂಡು ಮನೆಗೆ ಬಂದು ಇಳಿಸುತ್ತಾನೆ. ಬಸಮ್ಮ ಬಂದು ಸೌದೆಯನ್ನು ಬಿಚ್ಚಿದ ತಕ್ಷಣ ಹಾವುಗಳೆಲ್ಲಾ ಮನೆಯ ಓಡಾಡಿದವು. ಮಾದೇಶ್ವರ ತನ್ನ ಮಾಯೆಯಿಂದ ಮತ್ತೆ ಸೌದೆಯನ್ನು ಮಾಡಿ ಬಸಮ್ಮನಿಗೆ ಅಡಿಗೆ ಮಾಡುವಂತೆ ಹೇಳುತ್ತಾನೆ. ಅಡಿಗೆ ಮಾಡಿ ಹೊಲ ಉಳುಮೆ ಮಾಡುವಂತಹ ಬಸವೇಗೌಡನಿಗೆ ಊಟವನ್ನು ಪುಟ್ಟಿಯಲ್ಲಿ ತೆಗೆದುಕೊಂಡು ಮಾದೇಶ್ವರನ ಜೊತೆ ಹೋಗುತ್ತಾಳೆ. ೩ ಜನರು ಕೈಕಾಲು ತೊಳೆದು ಊಟ ಮಾಡಿದ

ನಂತರ ಬಸಮ್ಮ ಸೊಪ್ಪನ್ನು ಕುಯ್ಯಲಿಕ್ಕೆಂದು ಹೊರಟಾಗ ಮಾದೇಶ್ವರ ಹುಲಿಯ ಜೊತೆ ಆಟವಾಡುತ್ತಾನೆ. ಇದನ್ನು ಸತಿ–ಪತಿ ಇಬ್ಬರೂ ನೋಡುತ್ತಾರೆ. ಇದರಿಂದ ಆ ಇಬ್ಬರು ದಂಪತಿಗಳು ಮಾದೇಶ್ವರನನ್ನು ಹಿಡಿದುಕೊಳ್ಳಲು ಬಂದಾಗ ಅವರು ಲಿಂಗವಾಗಿ ಒಡೆದು ಮೂಡುತ್ತಾರೆ. ಇವತ್ತಿಗೂ ಸಹ ಅಲ್ಲಿ 'ಕೆಂಡಗಣ್ಣಸ್ವಾಮಿ ಗದ್ದಿಗೆ' ಇದೆ.

ಅಂದರೆ ಈ ಒಂದು ಕಾವ್ಯದಲ್ಲಿ ರೈತಾಪಿ ಜನರ ನಡುವೆ ಮಾದೇಶ್ವರ ಬೆಳೆದು ಬಂದಿರುವ ವಿಚಾರ ತಿಳಿದುಬರುತ್ತದೆ. ಬಸವೇಗೌಡ ಎಂಬ ರೈತನ ಕೃಷಿ ಪದ್ಧತಿ ಮತ್ತು ಅಂದಿನ ಕಾಲದಲ್ಲಿ ಬಳಸುತ್ತಿದ್ದ ಆಹಾರ ಅವರ ಜೀವನ ಕ್ರಮವನ್ನು ತಿಳಿಯಬಹುದಾಗಿದೆ. ಹಾಗೆಯೇ ಬಸಮ್ಮ ಸೊಪ್ಪು ಕೊಯ್ಯುವುದು ಅಂದಿನ ಆಹಾರ ಪದ್ಧತಿಗೆ ಅನುಗುಣವಾಗಿದೆ. ಸೌದೆ ತರುವುದು ಇವೆಲ್ಲಾ ಅಂದಿನ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿದೆ.

**ಬೇಡರ ಕನ್ನಯ್ಯನ ಜೀವನ ಕ್ರಮ**

ಈ ಬೇಡರ ಕನ್ನಯ್ಯ 'ಬ್ಯಾಡಗಂಪಣ' ಎಂಬ ಊರಿನ ಬ್ಯಾಡ ನಾಯ್ಕನ ಮಗನಾಗಿ ಹುಟ್ಟುತ್ತಾನೆ. ಇವನು ಹುಟ್ಟಿದ ತಕ್ಷಣವೇ ತಂದೆ–ತಾಯಿಯನ್ನು ಕಳೆದುಕೊಳ್ಳುತ್ತಾನೆ. ಬಹು ಪರಾಕ್ರಮಿ ಈತ. ಬೇಟೆಯಾಡುವುದರಲ್ಲಿ ನಿಸ್ಸೀಮ. ಬೇಡರ ಕೆಲಸವೇ ಅಥವಾ ವೃತ್ತಿ ಬೇಟೆಯಾಡುವುದು. ಈತನ ಬೇಟೆ ಮಾಡುವ ಕ್ರಮ ಉತ್ತಮವಾಗಿತ್ತು. ಬೇರೆಯವರಿಗೆ ಈತನನ್ನು ಕಂಡರೆ ಹೊಟ್ಟೆಕಿಚ್ಚಾಗಿತಂತೆ, ಅದಕ್ಕೆ ಇವನು ಯಾರ ಜೊತೆಯೂ ಸೇರದೆ ಒಬ್ಬನೆ ಬೇಟಿಯಾಡುತ್ತಿದ್ದನು. ಈತ ಬಿಲ್ಲುಬಾಣಗಳನ್ನು ತೊಟ್ಟು ಜಿಂಕೆ, ಸಾರಂಗಗಳನ್ನು ಹೊಡೆಯಲು ಹೊರಡುತ್ತಾನೆ. ಇದನ್ನು ನೋಡಿದಂತಹ ಮಾದೇವ ಈತನನ್ನು ನನ್ನ ಶಿಷ್ಯನಾಗಿ ಪಡೆಯಬೇಕು ಅಂದುಕೊಳ್ಳುತ್ತಾನೆ. ಆವತ್ತು ಇಡೀ ಕಾಡನ್ನೆಲ್ಲಾ ಅಲೆದರು ಒಂದು ಮೃಗವೂ ಬೇಡರ ಕನ್ನಯ್ಯನಿಗೆ ಸಿಗಲಿಲ್ಲವಂತೆ. ಇದರಿಂದ ಆತನಿಗೆ ಆಶ್ಚರ್ಯಉಂಟಾಗುತ್ತದೆ. ಈತ ಯಾವತ್ತೂ ಬರಿಗೈಯಲ್ಲಿ ಮನೆಗೆ ಹೋದವನಲ್ಲ. ಈವತ್ತು ನನ್ನ ಕೈ ಸೋತಿತಲ್ಲ ಎಂದು ಚಿಂತೆ ಮಾಡುತ್ತಾನೆ.

ಇದೇ ಸಂದರ್ಭದಲ್ಲಿ ಮಾದೇಶ್ವರನು ಕೂಡ ಬೇಟೆಗಾರನ ವೇಷವನ್ನು ಧರಿಸಿ ಅವರು ಬೇಟೆಯಾಡಲು ಬರುತ್ತಾನೆ. ಹುಲಿಯ ಮೇಲೆ ಕುಳಿತು ಅವರ ಮಾಯಾದಿಂದ ಹಂದಿಯನ್ನು ಸೃಷ್ಟಿಸುತ್ತಾರೆ. ಈ ಹಂದಿಯನ್ನು ನೋಡಿ ಬೇಡರ ಕನ್ನಯ್ಯ ತನ್ನ ಬಾಣವನ್ನು ಹೂಡುತ್ತಾನೆ. ಮರೆಯಲ್ಲಿ ನಿಂತು ಮಾದೇವ ಕೈಯಲ್ಲಿದ್ದ

ಬಾಣವನ್ನು ಹೂಡುತ್ತಾನೆ. ಎರಡು ಬಾಣಗಳು ಹಂದಿಗೆ ನಾಟುತ್ತವೆ. ಆದರೆ ಇಬ್ಬರಲ್ಲೂ ಜಗಳ ಪ್ರಾರಂಭವಾಗುತ್ತದೆ. ನಾನು ಹೊಡೆದ ಹಂದಿ ಎನ್ನುತ್ತಾನೆ ಬೇಡರಕನ್ನಯ್ಯ, ಇದರಿಂದ ಮಾದೇವ ನೀನು ಇನ್ನೂ ಬಾಲಕ ಚಿಕ್ಕವನು, ನಿನ್ನ ಹೆಸರೇನು? ಕುಲವೇನು, ಹಸಿದರುವವನು ನಾನು ಹಂದಿಯ ಹೊಡೆದೋನು ನಾನು! ಹೀಗೆ ಮಾತು ಇಬ್ಬರಲ್ಲೂ ಬೆಳೆದು ಮಾದೇಶ್ವರನು ಕನ್ನಯ್ಯನಿಗೆ ನಿನಗರ್ಧ ಹಂದಿ ಕೊಡುತ್ತೇನೆ ಎಂದು ಹೇಳಿದಾಗ ಅವನಿಗೆ ಕೋಪಬರುತ್ತದೆ. ಇಬ್ಬರಲ್ಲೂ ಜಗಳ ಪ್ರಾರಂಭವಾಗುತ್ತದೆ. ತೊಡೆತಟ್ಟಿ ಕನ್ನಯ್ಯ ಮಾದೇವನನ್ನು ಕರೆಯುತ್ತಾನೆ. ಓಡಿ ಬಂದು ಕನ್ನಯ್ಯ ಮಾದೇವನನ್ನು ಕೆಳಕ್ಕೆ ಕೆಡವಿ ಕಾಳಗ ಮಾಡುತ್ತಾನೆ.

ಹೀಗೆ ಮಾಯಾಕಾರ ಮಾದೇವ ಮಾಯದಿಂದ ಹಣ್ಣು ಮುದುಕನಾಗಿ ಕಾಣಿಸಿಕೊಳ್ಳುತ್ತಾನೆ. ಮತ್ತೆ ಹಂದಿಯ ಮೇಲೆ ಬೂದಿಯನ್ನು ಚೆಲ್ಲಿ ಎಚ್ಚರಗೊಂಡು ಹಂದಿ ಹೋಗುವಂತೆ ಮಾಡುತ್ತಾನೆ. ಇದರಿಂದ ಕನ್ನಯ್ಯ ಮುದುಕನ ಜೊತೆ ಸೇರಿ ಬದುಕೆಲ್ಲ ಹಾಳಾಯ್ತು ಎಂದು ಶಪಿಸುತ್ತಾನೆ. ಮತ್ತೆ ಮಾದೇವ ಬೇಡರ ಕನ್ನಯ್ಯನ ದಾರಿಗೆ ಮಾಯದ ಹಂದಿಯನ್ನು ಸೃಷ್ಟಿ ಮಾಡಿ ಬೆಟ್ಟ-ಗುಡ್ಡವನ್ನೆಲ್ಲಾ ತಟ್ಟು-ತಾಳೆಲ್ಲಾ ಅಲೆದಾಡುವಂತೆ ಮಾಡುತ್ತಾನೆ. ಕನ್ನಯ್ಯ ಹಂದಿಯನ್ನು ಕಾಣದೇ ರೋಜಾದ ಗುತ್ತಿಗೆ ಬಾಣವನ್ನು ಬಿಟ್ಟಾಗ ಆ ಗುತ್ತಿಯಲ್ಲಿ ಮುದುಕನ ವೇಷದಲ್ಲಿ ಮಾದೇವ ಇರುತ್ತಾನೆ. ಅವನ ಕಣ್ಣಿಗೆ ಬಾಣ ನಾಟುತ್ತದೆ. ಇದರಿಂದ ನೀನು ಯಾರು? ನೀನು ಶೂರರ ಮಗನಿರಬೇಕು ಎಂದು ಪ್ರಶ್ನಿಸಿ, ಅರಮನೆ ನನಗೆ ಬೇಡ ನನ್ನ ಕಣ್ಣುಕೊಡು ಎಂದು ಕೇಳುತ್ತಾನೆ. ನಿನ್ನ ಸೇವೆಯನ್ನು ಮಾಡಲು ಇರುತ್ತೇನೆ ಎಂದರು ಮಾದೇವ ಒಪ್ಪುವುದಿಲ್ಲ. ಬೇಡಿದದನ್ನು ಕೊಡುವವನು ಬೇಡರ ಕನ್ನಯ್ಯ, ಕೆಟ್ಟಿದವರನ್ನು ಬಿಟ್ಹೋಗುವವನಲ್ಲ ಎಂದು ಹೇಳುತ್ತಾನೆ.

ತನ್ನ ಬಾಣವನ್ನೇ ತೆಗೆದು ಆ ಬಾಣದಿಂದ ತನ್ನ ಕಣ್ಣನ್ನು ಕಿತ್ತು ಕೊಡುತ್ತಾನೆ. ಬಲಗಣ್ಣು ಇಲ್ಲವಲ್ಲೋ ಕನ್ನಯ್ಯ, ಎಡಗಣ್ಣ ಕೊಟ್ಟರೀತಿ ಬಲಗಣ್ಣ ಕೊಡು ಎಂದುಕೊಳ್ಳುತ್ತಾನೆ. ಮಾದೇವನ ಬಲಗಣ್ಗೆ ತನ್ನ ಕಾಲಿನ ಹೆಬ್ಬೆಟ್ಟು ಇಟ್ಟು ತನ್ನ ಬಲಗಣ್ಣನ್ನು ಕಿತ್ತುಕೊಡುತ್ತಾನೆ. ಇದರಿಂದ ಮಾದೇವ ಸಂತೋಷಗೊಂಡು ತನ್ನ ಶಿಷ್ಯನನ್ನಾಗಿ ಮಾಡಿಕೊಳಳ್ಳುತ್ತಾನೆ.

ನಂತರ ತನ್ನ ಅಪ್ಪಟ ಶಿಷ್ಯನಾಗಿ ಮಾಡಿಕೊಂಡು ಆ ಏಳ್ಮಲೆ ಮಾದೇವ ತನ್ನ ವಾಸಸ್ಥಾನವನ್ನು ನೋಡಿಕೊಳ್ಳಲು ನೇಮಿಸುತ್ತಾನೆ. ಅಂದರೆ ಕಾಡಿನಲ್ಲಿ ವಾಸಮಾಡುವ ಬೇಡರ ವೃತ್ತಿಯೇ ಬೇಟೆಯಾಡುವುದು, ಅಲ್ಲಿ ಸಿಕ್ಕುವ ಪ್ರಾಣಿಗಳೇ ಅವರ

ಆಹಾರವಾಗಿತ್ತು ಎಂದು ಹೇಳಬಹುದು. ಆದರೆ ಅಂದಿನ ಆ ಬೇಡರಕನ್ನಯ್ಯ ಎಷ್ಟು ಪ್ರಾಮಾಣಿಕವಾಗಿದ್ದ ಎಂಬುದಕ್ಕೆ ಸಾಕ್ಷಿಯಾಗಿದೆ. ಮತ್ತು ಅಷ್ಟೇ ಭಕ್ತಿವಂತನಾಗಿದ್ದ ಹಾಗೂ ಬೇಟೆಯಲ್ಲಿ ಕೂಡ ನೈಪುಣ್ಯತೆಯನ್ನು ಹೊಂದಿದ್ದ ಹಾಗೂಕಾಡಿನಲ್ಲಿ ವಾಸಮಾಡುವ ಜನರೆಲ್ಲಾ ಕೂಡ ಬಿಲ್ಲು ವಿದ್ಯೆಯನ್ನು ಕಲಿತಿದ್ದರು ಎಂಬುದಕ್ಕೆ ಇದು ಸಾಕ್ಷಿಯಾಗಿದೆ.

**ಆಲಂಬಾಡಿ ಜುಂಚೇಗೌಡನ ಕುಟುಂಬ**

ಆಲಂಬಾಡಿ ದೇಶ ಅತಿ ಮುದ್ದಾಗಿ ಸಮೃದ್ಧಿಯಾಗಿದ್ದ ಪಟ್ಟಣವಾಗಿತ್ತು. ಇಲ್ಲಿ ಆಲಪ್ಪೇಗೌಡ, ಬ್ಯಾಲಪ್ಪೇಗೌಡ, ಕುರುಬೀರೇಗೌಡ, ಮರುಜುಂಜೇಗೌಡ, ಬೆಟ್ಟೇಗೌಡ ಮತ್ತು ಡೊಳ್ಳೊಟ್ಟೆ ಜುಂಜೇಗೌಡ ಈ ಆರು ಜನಕ್ಕೆ ಕಿರಿಯವನು ಜುಂಜೇಗೌಡ ಇವನು ಅತ್ಯಂತ ಶ್ರೀಮಂತತನದಿಂದ ಬದುಕನ್ನು ನಡೆಸುತ್ತಿದ್ದನು. ಏಳು ಹುಂಡಿ ದನ, ಏಳುಹುಂಡಿಕುರಿ ಸಾಕಿದ್ದನಂತೆ, ಹನ್ನೆರಡು ಜನ ಜೀತದ ಆಳುಗಳಿದ್ದರಂತೆ, ಈತನ ಮಡದಿ ಆಲಮ್ಮ, ಮಾದೇಶ್ವರ ಈ ಜುಂಜೇಗೌಡನ ಮನೆಗೆ ಭಿಕ್ಷೆಯನ್ನು ಕೇಳುವ ಬಿಕ್ಷುಕನ ವೇಷದಲ್ಲಿ ಬರುತ್ತಾರೆ. ಭಿಕ್ಷೆಯನ್ನು ತೆಗೆದುಕೊಂಡು ಅಲ್ಲಿದ್ದಂತಹ ಬಿಳಿ ಜಲಗೊಂಬಿನ ಹಸುವಿನ ಮೇಲೆ ದೃಷ್ಟಿ ಬೀರುತ್ತಾರೆ. ಇದರಿಂದ ಹಸು ಪ್ರತಿನಿತ್ಯ ಮಾದೇವ ವಾಸವಾಗಿದ್ದ ಮೂಗುತ್ತಕ್ಕೆ ದನಗಳ ಹಿಂಡನ್ನು ಬಿಟ್ಟು ಪಕ್ಷಿಯ ರೀತಿ ಹಾರಿಬಂದು ಬಾಡುಬಾಕನ ಮುಳ್ಳುಗಾಣೆ, ಸೀಗೆ, ಶ್ರೀಗಂಧದ ಗುತ್ತಿಯನ್ನು ಒತ್ತರಿಸಿ ಹೊನ್ನುತ್ತಕ್ಕೆ ಹಾಲನ್ನು ಕರೆಯುತ್ತಿತ್ತು. ಹುತ್ತವೆಲ್ಲಾ ತುಂಬಿ ಕೋಡಿ ರೀತಿ ಹರಿಯುತ್ತಿತ್ತಂತೆ. ಪ್ರತಿನಿತ್ಯ ಹೀಗೆ ಹಸುಹಾಲು ಕರೀತಾ ಇರುತ್ತದೆ. ಮನೆಯಲ್ಲಿ ಆಲಮ್ಮ ಹಾಲು ಕರೆದರೆ ರಕ್ತ ಬರುತ್ತಿತ್ತಂತೆ ಇದರಿಂದ ಕೋಪಗೊಂಡ ಜುಂಜೇಗೌಡನು ಎಲ್ಲಾ ಅಣ್ಣಂದಿರಿಗೆ ವಿಷಯ ತಿಳಿಸುತ್ತಾನೆ.

ಅಣ್ಣ-ತಮ್ಮಂದ್ರೆಲ್ಲಾ ಮಾತಾಡ್ಕಂಡು ಈವತ್ತು ಆ ಬಿಳಿ ಹಸವನ್ನು ಕಾದುಬಿಡಬೇಕು ಎಂದು ಹೇಳುತ್ತಾರೆ. ಜುಂಜೇಗೌಡ ಎಲ್ಲಾ ದನಗಳನ್ನು, ೧೨ ಮಂದಿ ಜೀತಗಾರರನ್ನು ಕಟ್ಕೊಂಡು ಕೊಡಲಿ ಮಚ್ಚನ್ನು ಕೈಯಲ್ಲಿ ಹಿಡಿದು ಹೋಗುತ್ತಾನೆ. ಆ ಹಸು ಅಲ್ಲಾಣಿ ಇಲ್ಲಾಣಿ ನುಗ್ಗಿ ಮಾದೇಶ್ವರನಿರುವ ಹುತ್ತಕ್ಕೆ ಬಂದು ಹಾಲನ್ನು ಕರೆಯುತ್ತದೆ. ಇದನ್ನು ನೋಡಿದ ಮರುಜುಂಜಯ್ಯ, ಡೊಳ್ಳೊಟ್ಟೆ ಜುಂಜೇಗೌಡನ ಪಾದ್ಕೆ ನಮಸ್ಕಾರ ಮಾಡಿ ಅಣ್ಣಯ್ಯ ಇದು ಆ ಸೀಗೆ ಗುತ್ತಿಯಲ್ಲಿ ಹಾಲು ಕರ್ದು ಬಂತು ಎಂದು ಹೇಳುತ್ತಾನೆ. ಇದನ್ನು ಕೇಳಿದಂತ ಆರು ಜನ ಅಣ್ಣಂದಿರು ನಾಳೇ ಹೋಗೋಣ ಏನಿದ್ದರೂ ನೋಡೋಣ ಎಂದು ಬುತ್ತಿಕಟ್ಟಿಕೊಂಡು ಮುಚ್ಚುಗಳನ್ನು ಕೈಯಲ್ಲಿ ಹಿಡಿದು ಹೋಗುತ್ತಾರೆ.

ಆರುಜನರು ಹುತ್ತವನ್ನು ನೋಡಿ, ಆ ಹುತ್ತವನ್ನು ಕಡಿದಾಕುತ್ತಾರೆ. ಮಚ್ಚಿನಿಂದ ಕೆಮ್ಮತ್ತೀ ಮರಕ್ಕೆ ಹೊಡೆದು ಹುತ್ತವನ್ನು ಕತ್ತರಿಸಿಕೊಂಡು ಮಾದೇಶ್ವರನ ಬಲಗಡೆ ಪಾರ್ಶ್ವಕ್ಕೆ ಏಟುಬಿದ್ದಾಗ, ಮಾದೇಶ್ವರ ಹೊಡದೋರು ಯಾರು? ಅಂತದಲ್ಲ ಇಲ್ಲಿ ಪಿಶಾಚಿಯೋ ಪೀಡೆಯೋ ಇದೇನೂ ಗೊತ್ತಿಲ್ಲ ಅಂತ ಬೆಂಕಿ ಇಟ್ಟು ಬೇಯಿಸ್ಬುಟ್ರಂತೆ, ಮಾದೇವ ಎಷ್ಟೇ ಕೇಳಿಕೊಂಡರು ಜುಂಜೇಗೌಡ ಕಲ್ಗುಡಿ ಕಟ್ಟಿಸಲು ಒಪ್ಪುವುದಿಲ್ಲ. ಇದರಿಂದ ಮಾದೇಶ್ವರ ಕೋಪಗೊಂಡನು.

ಮಾದೇಶ್ವರ ಅವರ ಗರ್ವವನ್ನು ನಾಶಮಾಡಲಿಕ್ಕೆ ಈ ೬ ಜನ ಅಣ್ಣತಮ್ಮಂದಿರು ೩೩೦ ಪಲ್ಯ ಕಳ್ಳ ಬೆಳ್ದು ಒಕ್ಕಣೆ ಮಾಡುತ್ತಿರುವಾಗ ಅಲ್ಲಿಗೆ ಯಾರೇ ಪರದೇಸಿ ಬಂದರು ಭಿಕ್ಷೆ ಕೊಡಬ್ಯಾಡ ಅಂತ ಮರುಜುಂಜಯ್ಯನನ್ನು ಕಾವಲಿಟ್ಟಿರುತ್ತಾರೆ. ಮಾದೇಶ್ವರ ತನ್ನ ಮಾಯದಿಂದ ಮರುಜುಂಜಯ್ಯನಿಗೆ ಬಾಯಿ ಬಾರದಂತೆ ಮಾಡಿ ೩೩೦ ಪಲ್ಯ ಕಡಲೆಯನ್ನು ತಮ್ಮ ಜೋಳಿಗೆಗೆ ತುಂಬಿಕೊಳ್ಳುತ್ತಾರೆ. ಇದರಿಂದ ಕೋಪಗೊಂಡ ಮರು ಜುಂಜೇಗೌಡ ತನ್ನ ಅಣ್ಣಂದಿರಿಗೆ ವಿಷಯವನ್ನು ಮುಟ್ಟಿಸುತ್ತಾನೆ. ಆತನನ್ನು ಎಲ್ಲೇ ಇದ್ದರು ಹುಡುಕಿ ತಂದು ಊರಿನ ಮುಂದೀನ ಚಾವಡಿಗೆ ಕಟ್ಟಿಹಾಕಬೇಕು, ಅವನಿಗೆ ಚಿತ್ರಹಿಂಸೆ ಕೊಡಬೇಕು ಅಂತ ಹೇಳುತ್ತಾರೆ.

ಆ ಆರು ಜನರು ಹಾಲು ಅನ್ನದ ಬುತ್ತಿ ಕಟ್ಟಿಸಿಕೊಂಡು ಮಾದೇವನನ್ನು ಹುಡುಕಲು ಕುದುರೆಗಳನ್ನೇರಿ ಹೋಗುತ್ತಾರೆ. ಬಾಗಲಲ್ಲೆ ೭ ಜನರ ತಲೇ ಮೇಲೆ ೭ ಪಲ್ಲಿಗಳು ಬಿದ್ವಂತೆ. ಅಣ್ಣಯ್ಯ ಇಲ್ಲೇ ಒಂದು ಶಕುನವಾಯ್ತಲಪ್ಪ ಅಂದ್ರಂತೆ. ೩ ಶಕುನಗಳಾದರೂ ಕೂಡ ಅವರು ಮುಂದೆ ಬಂದೂಕಗಳನ್ನು ತೆಗೆದುಕೊಂಡು ಹೋಗುತ್ತಾರೆ. ಮಾದೇವ ಹುಲಿಗಳನ್ನು ಬಿಟ್ಟು ಅವರನ್ನು ಕಾಡಿಗೊಬ್ಬರು, ಬೀಡಿಗೊಬ್ಬರು ದಿಕ್ಕಾ ಪಾಲಾಗುವಂತೆ ಮಾಡಿದರು. ಡೊಳ್ಳೊಟ್ಟೆ ಜುಂಜೇಗೌಡ ಓಡ್ಲಿಕ್ಕಾಗದೇ ಕಟ್ಟೆಗೆ ಹೋಗುತ್ತಾನೆ. ಹೀಗೆ ಅವರಿಗೆ ಅನೇಕ ಕಷ್ಟಗಳನ್ನು ಕೊಡುತ್ತಾನೆ. ಅಂದಿನ ಕಾಲದಲ್ಲಿ ಮಾಯ ವಿದ್ಯೆಗಳನ್ನು ಮಾದೇಶ್ವರ ಕಲಿತಿದ್ದಿರಬಹುದು ಎಂಬ ಅಭಿಪ್ರಾಯವಿದೆ. ಮಾಟ, ಮಂತ್ರ ಮತ್ತು ಮೋಡಿ ವಿದ್ಯೆಗಳು ಮಾದೇಶ್ವರನಿಗೆ ಗೊತ್ತಿತ್ತು ಎಂಬುದಾಗಿ ತಿಳಿದುಬರುತ್ತದೆ. ಕೊನೆಗೆ ಮಾದೇವನೆ ಕೊರವಂಜಿ ವೇಷ ಧರಿಸಿ ಶಾಸ್ತ್ರವನ್ನು ಹೇಳುತ್ತಾನೆ. ಮತ್ತೆ ಜುಂಜೇಗೌಡನಿಗೆ ಕನಸಿನಲ್ಲಿ ಬಂದು ಎಚ್ಚರಿಕೆಯನ್ನು ನೀಡಿದಾಗ ಅವರಿಗೆ ಅರಿವಾಗುತ್ತದೆ. ಏಳುಹುಂಡಿ ದನಗಳು, ಕುರಿಗಳು ರೋಗ ಬಂದು ಸಾಯುತ್ತವೆ. ಮನೆಯಲ್ಲಿ ಇದ್ದ ರಾಗಿಯೆಲ್ಲಾ ನಾಶವಾಗುತ್ತದೆ. ಮಕ್ಕಳೆಲ್ಲರನ್ನು ಕಲ್ಲುರೂಪ ಮಾಡಿದ್ದಾನೆ. ಮಲಗ ಜುಂಜಯ್ಯ ಚಿಂತಿಸುತ್ತಿದ್ದಾನೆ, ಜೋಳವನ್ನೆಲ್ಲಾ ಮರಳುಮಾಡಿದ್ದಾರೆ. ಭತ್ತದ ಗುಳಿನೆಲ್ಲಾ

ಹೊಟ್ಟುಮಾಡುತ್ತಾರೆ. ಆ ಆಲಮ್ಮ ಜುಂಜೇಗೌಡನಿಗೆ ಈಗಲಾದರೂ ಮಾದೇವನ ಒಕ್ಕಲಾಗಿ ಎಂದಾಗ ಅವಳನ್ನೇ ಬೈಯ್ಯುತ್ತಾನೆ. ಊಟವಿಲ್ಲದೆ ಹಸಿವಿನಿಂದ ಸಾಯುವಂತೆ ಅವರಿಗೆ ಕಷ್ಟವನ್ನು ಕೊಡುತ್ತಾನೆ.

ಈ ರೀತಿಯಾಗಿ ಎಲ್ಲಾ ಕಷ್ಟಗಳನ್ನು ಕೊಟ್ಟು ನನಗೊಂದು ಗುಡಿಯನ್ನು ಕಟ್ಟಿಸಬೇಕು. ಇದರಿಂದ ನಿನಗೆ ಎಲ್ಲಾ ಐಶ್ವರ್ಯವನ್ನು ಕೊಡುತ್ತೀನಿ ಅಂದಾಗ ಅಷ್ಟು ಹಣ ನಮ್ಮ ಹತ್ತಿರ ಇಲ್ಲಾ ಎಂದು ಹೇಳುತ್ತಾರೆ. ನಿನ್ನ ಹಸು ಬಂದು ಹಾಲು ಕರಿತೀತಾಲ್ಲ. ಅಲ್ಲಿಗೆ ಬಂದು ನೀವು ಗುದ್ಲಿಪೂಜೆ ಮಾಡಿದರೆ ನಿಮಗೆ ೬ ಕೊಪ್ಪರಿಕೆ ದ್ರವ್ಯಸಿಗುತ್ತದೆ ಎಂದು ಹೇಳುತ್ತಾನೆ. ಎಲ್ಲಾ ಅಣ್ಣತಮ್ಮಂದಿರು ಒಟ್ಟಿಗೆ ಸೇರಿದ್ದಾರೆ, ಮಕ್ಕಳು ಬಂದಿದ್ದಾರೆ. ಮತ್ತೆ ಅವರ ಐಶ್ವರ್ಯವೆಲ್ಲಾ ಬಂದು ತುಂಬಿಕೊಳ್ಳುತ್ತದೆ.

ಹೀಗೆ ಆಲಂಬಾಡಿಯ ಜುಂಜೇಗೌಡನ ಒಂದು ಕುಟುಂಬ ವ್ಯವಸ್ಥೆ ಎಷ್ಟು ಅಚ್ಚುಕಟ್ಟಾಗಿತ್ತು ಎಂಬುದನ್ನು ತಿಳಿಯಬಹುದಾಗಿದೆ ಮತ್ತು ಅವರ ಒಂದು ದರ್ಬಾರು ಮತ್ತು ಅಹಂಕಾರಗಳನ್ನು ತಿಳಿಯಬಹುದಾಗಿದೆ. ಅಂದಿನ ಕಾಲದಲ್ಲಿದ್ದ ಪಶು-ಸಂಗೋಪನೆಯನ್ನು ತಿಳಿಯಲು ಇದು ಸಹಕಾರಿಯಾಗಿದೆ ಮತ್ತು ಅವರ ಕುಲಕಸುಬು ಯಾವ ರೀತಿ ಇತ್ತು ಹಾಗೆಯೇ ವ್ಯವಸಾಯ ಪದ್ಧತಿಯ ಕ್ರಮ ಮತ್ತು ಅವರ ಕುಟುಂಬ ವ್ಯವಸ್ಥೆ ಹೇಗಿತ್ತು ಎಂಬುದನ್ನು ತಿಳಿಯಲು ಸಾಧ್ಯವಾಗಿದೆ. ಅಂದಿನ ಕಾಲದಲ್ಲಿ ಪಶುಪಾಲನೆಯು ಕೂಡ ಅತ್ಯಂತ ಪ್ರಮುಖವಾದ ಕಸುಬಾಗಿತ್ತು.

**ಬೇಡರ ಕಣ್ಣಯ್ಯ – ಬ್ರಾಹ್ಮಣಪೂಜಾರಿಯ ಭಕ್ತಿ**

ಏಳುಮಲೆ ಮಾದೇಶ್ವರನ ಲಿಂಗವನ್ನು ಪ್ರತಿನಿತ್ಯ ಪೂಜೆ ಮಾಡಲಿಕ್ಕೆ ಆಲಂಬಾಡಿ ಜುಂಜಪ್ಪನವರು ಒಬ್ಬ ಬ್ರಾಹ್ಮಣ ಪೂಜಾರಿಯನ್ನು ನೇಮಿಸಿದ್ದರು. ಬ್ರಾಹ್ಮಣನು ಬರ್ಗನಕ್ಕಿ ಅನ್ನ ಮಾಡಿ ಲಿಂಗಕ್ಕೆ ಎಡೆಮಾಡುತ್ತಿದ್ದ. ಬ್ಯಾಡನಾಯಕನ ಮಗನಾದ ಬೇಡರಕಣ್ಣಪ್ಪ ಬಿಲ್ಲು ಬಾಣ ತೊಟ್ಟು ಹುಲ್ಲೆ, ಸಾರಂಗಗಳನ್ನು ಕೊಂದು, ಬೆಂಕಿಯಲ್ಲಿ ಸುಟ್ಟು ಹದವನ್ನು ಮಾಡಿ "ನನ್ನಪ್ಪಾಜಿ ನಿನುಗೊಂದ್ ಭಾಗ ನನುಗೊಂದ್ ಭಾಗ"[೧] ಅಂತ ಹೇಳಿ ಮಾಂಸವನ್ನು ಶಿವಲಿಂಗಕ್ಕೆ ಇಡುತ್ತಿದ್ದ. ಪ್ರತಿನಿತ್ಯ ಬೆಳಗಿನ ಜಾವ ಬ್ರಾಹ್ಮಣ ಬಂದು ಲಿಂಗದ ಮುಂದೆ ಇದ್ದ ಮಾಂಸವನ್ನೆಲ್ಲಾ ಕಂಡು ಈ ಮಾಂಸಗಳಿಂದ ಯಾವೊನೋ ಶಿವಲಿಂಗವನ್ನು ಕೊಳಕು ಮಾಡಿದ್ದಾನೆಂದು, ಅದನ್ನು ಎತ್ತಿ ಬೀಸಾಕಿ ಬರಗ್ನಕ್ಕಿ ಅನ್ನವನ್ನು ಎಡೆಮಾಡುತ್ತಿದ್ದನು.

೧. ಮಲೆಯ ಮಾದೇಶ್ವರ, ಪಿ.ಕೆ.ರಾಜಶೇಖರ, ಪುಟ ೫೦೦.

ಬ್ರಾಹ್ಮಣ ಹೋದ ಮೇಲೆ ಬೇಡರ ಕನ್ನಯ್ಯ ಜಿಂಕೆ, ಮೊಲವನ್ನು ಹೊಡ್ದು ಪ್ರತೀ ನಿತ್ಯ ನೈವೇದ್ಯ ಮಾಡ್ತಿದ್ದ. ಇದರಿಂದ ಮಾದೇವನಿಗೆ ಇಬ್ಬರು ಭಕ್ತರನ್ನು ಪರೀಕ್ಷೆ ಮಾಡಲು, ನನಗೆ ತಕ್ಕ ಭಕ್ತರು ಬೇಕು ಎಂದು ದೇವೇಂದ್ರನಿಗೆ ಆಕಾಶ, ಭೂಮಿ ನಡುಗುವಂತಹ ಕಾಳಿ, ಕಂಕಾಳಿ ಮಳೆಯನ್ನು ಸುರಿಸು ಎಂದು ಹೇಳುತ್ತಾನೆ. ಅದರಂತೆ ದೇವೇಂದ್ರ ಈಶಾನ್ಯ ದಿಕ್ಕಿಗೋಗಿ ತುಂಬಿದ ಶುಕ್ರವಾರದಂದು ಕಾಳಿ, ಕಂಕಾಳಿ ಅನ್ನೋ ಮಳೆಗಳನ್ನು ಸುರಿಸಿದನು, ಕೆಂದೂಳು ಎದ್ದೇಳಿತು ಸಿಡುಲು-ಗುಡುಗು, ಗಾಳಿ ಮಳೆ ಬಂತು.

ಬ್ರಾಹ್ಮಣನು ಕುಲೋತ್ತಮನಾಗಿರುವಂತವನು ಬರಗ್ನಕ್ಕಿ ಅನ್ನವನ್ನು ತಂದು ಪೂಜೆ ಮಾಡುವಾಗ ಗುಡಿಯಲ್ಲೆ ಗಡಗಡ ಅಂತ ನಡುಗುತ್ತಿತ್ತು. ಪೂಜೆ ಮಾಡುತ್ತಿದ್ದ ಬ್ರಾಹ್ಮಣ ಭಯಗೊಂಡು "ಮಳೆಗಾಳಿ ಬರುತ್ಯೆತೆ ನನ್ನ ಮೇಲೆ ಕಲ್ಗುಡಿ ಬಿದ್ರೆ ಗತಿ ಏನು ಎಂದು ಎಡೆಯನ್ನು ಎತ್ಕೊಂಡು ಹಾರುವಗಚ್ಚೆಯನ್ನು ಎತ್ಕೊಂಡು, ಪುಳುಬುಟ್ ಹಾರುಸ್ಕೊಂಡು ನನ್ನ ಪ್ರಾಣ ಹೋಗುತ್ತದೆ ಎಂದು ಓಡಿಹೋಗುತ್ತಾನೆ.

ಇತ್ತ ಕಡೆ ಬ್ಯಾಡ್ನಾಯ್ಕನ ಮಗ ಹುಲ್ಲೆ, ಸಾರಂಗವನ್ನು ಸಾಯಿಸಿ ಬೆಂಕಿಯಲ್ಲಿ ಸುಟ್ಟು "ಮಾದಪ್ಪಂಗರ್ಧ ನನಗರ್ಧ"[೧] ಅಂತ್ಹೇಳಿ ಅರ್ಧವನ್ನು ಕತ್ತರಿಸಿ ಲಿಂಗಕ್ಕೆ ಎಡೆಮಾಡುತ್ತಾನೆ. ಲಿಂಗಕ್ಕೆ ನೈವೇದ್ಯ ಮಾಡುತ್ತಾನೆ. ಲಿಂಗಕ್ಕೆ ನೈವೇದ್ಯ ಮಾಡುತ್ತಾನೆ. ಲಿಂಗಕ್ಕೆ ನೈವೇದ್ಯ ಮಾಡ್ಬುಟ್ಟು ಈಶಾನ್ಯ ದಿಕ್ಕಿನ ಕಡೆ ನೋಡಿದಾಗ ಮಳೆಗಾಳಿ ಸಿಡಿಲು-ಗುಡುಗುಗಳನ್ನು ನೋಡಿ, ನಾನು ಹೇಗೂ ನೆನೆಕೊಳ್ತಾ ಇದ್ದೀನಿ ನನ್ನ ಮಾದೇವ ನೆನ್‌ಕೊಳ್ತಾನಲ್ಲ ಎಂದು ಆ ಶಿವಲಿಂಗವನ್ನು ಎದೆಗೆ ತಬ್ಬಿಕೊಳ್ಳುತ್ತಾನೆ. ಗುಡಿಯೆಲ್ಲಾ ನಡುಗುವಾಗ, ಓಹೊ! ಏಳ್ಮಲೆ ಮಾದೇವನ ಮೇಲೆ ಕಲ್ಲು ಬಿದ್ದರೆ ಏನು ಗತಿ ಎಂದು ಲಿಂಗವನ್ನು ಕೀಳಲು ಪ್ರಯತ್ನಿಸುತ್ತಾನೆ. ಇದರಿಂದ ಅವನು ದೇವೇಂದ್ರನನ್ನು ಬೇಡಿಕೊಳ್ಳುತ್ತಾನೆ, ಈ ಮಳೆಗಾಳಿ ಎಲ್ಲವನ್ನು ಹಿಂದಕ್ಕೆ ಕರೆಯಿಸಿಕೋ ಎಂದು ಬೇಡಿಕೊಂಡಾಗ ಮಾದೇವ ಪ್ರತ್ಯಕ್ಷನಾಗುತ್ತಾನೆ.

ಪ್ರತ್ಯಕ್ಷನಾದ ಮಾದೇವ ಬೇಡರ ಕನ್ನಯ್ಯ ನೀನು ಚಿಕ್ಕವನಾದರು ನಿನ್ನ ಭಕ್ತಿಗೆ ಮೆಚ್ಚಿದೆ. ಇನ್ನು ಮುಂದೆ ನಿನ್ನ ಕುಲದೋರೆ ನನಗೆ ಪೂಜೆ ಮಾಡಬೇಕು ಎಂದು ಹೇಳುತ್ತಾನೆ. ಬ್ರಾಹ್ಮಣರು ಬೇಡ, ಕಾಡುಮೃಗಗಳನ್ನು ಹೊಡೆಯೋದ ಬಿಡು ಎಂದಾಗ ಆವತ್ತಿನಿಂದ ಮಾಂಸವನ್ನು ತಿನ್ನುವುದನ್ನು ಬೇಡರ ಕನ್ನಯ್ಯ ಬಿಟ್ಟುಬಿಡುತ್ತಾನೆ. ಲಿಂಗಧಾರಣೆಯನ್ನು ಮಾಡಿಸಿಕೊಳ್ಳುತ್ತಾನೆ. ಕನ್ನಯ್ಯನಿಗೆ ಅಂತರಗಂಗೆಯಲ್ಲಿ

೧. ಮಲೆಯ ಮಾದೇಶ್ವರ, ಪಿ.ಕೆ.ರಾಜಶೇಖರ, ಪುಟ ೫೦೨.

ಸ್ನಾನಮಾಡಿಸಿ, ಹಡಪದಣ್ಣನಿಂದ ತಲೆಬೋಳಿಸಿ ಕೊರಳ್ಗೆ ಮಾದೇವ ರುದ್ರಾಕ್ಷಿಯನ್ನು ಕಟ್ಟಿ ಬಸವಣ್ಣನ ಹೆಸರನ್ನು ಹೇಳಿಸಿ, ಹಣೆಗೆ ಭಸ್ಮವನ್ನು ಧರಿಸುತ್ತಾರೆ.

ಆವತ್ತಿನಿಂದ ಆತನು ಬೇಟೆಯಾಡುವುದನ್ನು ಬಿಟ್ಟು ಪುಷ್ಪಾದಿಗಳನ್ನು ತಂದು ಕೈಸೆರೆಯಲ್ಲಿ ನೀರನ್ನು ತಂದು ಮಾದೇಶ್ವರ ಲಿಂಗವನ್ನು ತೊಳೆದು ಪುಷ್ಪಗಳನ್ನು ಇಟ್ಟು ಲಿಂಗಕ್ಕೆ ಪೂಜೆ ಮಾಡುತ್ತಾನೆ. ಇಂದಿಗೂ ಸಹ ಈ ವಂಶದ ತಮ್ಮಡಿಗಳು ಎಂಬುವವರು ಮಾದೇಶ್ವರನನ್ನು ಪೂಜೆ ಮಾಡುತ್ತಾರೆ. ಹೀಗೆ ಇವರ ಕುಟುಂಬದವರೆ ಮುಂದುವರಿಸಿಕೊಂಡು ಹೋಗುವ ಪದ್ಧತಿ ಇಂದಿಗೂ ಮಹದೇಶ್ವರ ಬೆಟ್ಟದಲ್ಲಿದೆ.

**ಸಂಕಮ್ಮ ಮತ್ತು ನೀಲಯ್ಯರ ವಿವಾಹ**

ಕುರುಬರ ಕುಲದಲ್ಲಿ ಹುಟ್ಟಿದ ಜಾತೀಲಿ ಸೋಲುಗ ನೀಲೇಗೌಡ ಇವನಿಗೆ ೭ ಜನ ಗಂಡು ಮಕ್ಕಳಿದ್ದರು. ಸೋಲಿಗರ ಪೋಡಿನಲ್ಲಿ ವಾಸವಾಗಿದ್ದವನೇ ಕಾಡು ಕುರುಬ ನೀಲೇಗೌಡನಿಗೆ ೭ ದೊಡ್ಡಿ ಎಮ್ಮೆಗಳು, ಏಳು ದೊಡ್ಡಿ ದನಗಳು, ಏಳುದೊಡ್ಡಿ ಕುರಿಮಂದೆ ಆ ಕುರಿಗಳನ್ನು ದನಗಳನ್ನು ಕಟ್ಟುವ ಗೂಟವೆಲ್ಲಾ ಚಿನ್ನದಿಂದ ಮಾಡಿಸಿದ್ದನಂತೆ. ಕೈಕಾಲು ಮುಖ ತೊಳೆಯಲು ಪಚ್ಚೆಕಲ್ಲನ್ನು ಹಾಕಿಸಿಕೊಂಡಿದ್ದನಂತೆ, ಏಳು ಕಣಜ ದವಸ ಧಾನ್ಯಗಳು ತುಂಬಿತ್ತಂತೆ. ಈ ರೀತಿಯಾಗಿ ಅತ್ಯಂತ ಶ್ರೀಮಂತನಾಗಿ ಇವನು ಸೋಲಿಗರ ಪೋಡಿನಲ್ಲಿ ಮೆರೆಯುತ್ತಿದ್ದ, ೬ ಜನ ಗಂಡು ಮಕ್ಕಳಿಗೂ ಮದುವೆ ಮಾಡಿದ್ದನಂತೆ, ಒಬ್ಬೊಬ್ಬ ಮಕ್ಕಳಿಗೂ ಒಂದೊಂದು ಕೆಲಸ ನೇಮಿಸಿರುತ್ತಾನೆ. ಕೊನೆಯವನಾದ ಅತ್ಯಂತ ಕಿರಿಯವನಾದ ಮಲೆಯ ಸೋಲುಗ ನೀಲಯ್ಯ ಮಾಟಕಾರ, ಮಂತ್ರಕಾರ, ಕೋಪಗಾರನಾಗಿದ್ದು ಅತ್ಯಂತ ಸುಂದರ-ನಾಗಿದ್ದನಂತೆ, ಇವನ ಕೆಲಸ ದನ, ಎಮ್ಮೆ, ಕುರಿಗಳನ್ನು ಕಾಡಿನಲ್ಲಿ ಮೇಯಿಸುವುದು. ಇವನು ಅಣ್ಣಂದಿರು ಹೇಳಿದ ಕೆಲಸ ಮಾಡಿಕೊಂಡು, ಅತ್ತಿಗೆಯರಿಂದ ಊಟ ಬಡಿಸಿಕೊಂಡು ರಾಗಿ ಹಿಟ್ಟನ್ನು ಮತ್ತು ಹುರುಳಿ ಕಾಳನ್ನು ತುಂಬ್ಕೊಂಡು ಕಾಡಿಗೆ ಹೋಗುತ್ತಿರುತ್ತಾನೆ. ಒಂದು ಬೂದುಗಂಬಳಿ ಅವನ ಹೆಗಲ ಮೇಲೆ ಹೊದ್ದುಕೊಂಡು, ಒಂದು ದೊಣ್ಣೆ ಹಿಡಿದು ದನಗಳನ್ನು ಮೇಯಿಸಲು ಹೊರಡುತ್ತಾನೆ.

ಪ್ರತಿನಿತ್ಯ ಈ ಬುತ್ತಿ ಈತನು ಇದೇ ಕಾಯಕದಲ್ಲಿ ನಿರತನಾಗಿರುತ್ತಾನೆ. ರಾತ್ರಿಯಾದ ಮೇಲೆ ಧಾರ್ಣೆ ಮಾಡಿಕೊಂಡು ಊಟ ಮಾಡಿ ತಂದೆತಾಯಿಯ ಹತ್ತಿರಕ್ಕೆ ಬಂದು ಕುಳಿತು ಮಾತಾಡುತ್ತಾನೆ. ನಿನಗೆ ನಾವು ಮದುವೆ ಮಾಡಿ ಸಂತೋಷ-ಪಡಬೇಕೆಂಬುದು ಇವರ ಆಸೆಯಾಗಿರುತ್ತದೆ. ಇದರಿಂದ ತಂದೆತಾಯಿಯರು ಈತನ ಮದುವೆಯ ವಿಷಯವನ್ನು ಹೇಳಿ ಮದುವೆಗೆ ಒಪ್ಪಿಸುತ್ತಾರೆ. ಈಕೆಯ ತಾಯಿ ನಂಜಮ್ಮ ಹೇಳಿದಾಗ ಅವರ ಮಾತಿಗೆ ಅವನು ಒಪ್ಪುತ್ತಾನೆ. ನೀನೊಪ್ಪಿದ ಹೆಣ್ಣ ನೋಡವ್ವ ತಾಯಿ ಎಂದು ಹೇಳುತ್ತಾನೆ. ನಂಜಮ್ಮ ೫ ಜನ ಮುತ್ತೈದೆಯರನ್ನು

ಕರಕೊಂಡು ವಿಳ್ಳೆದೆಲೆ ಅಡಿಕೆ ತೆಗೆದುಕೊಂಡು, ಬೆಟ್ಟ–ಗುಡ್ಡ, ಹಳ್ಳ–ಕೊಳ್ಳ, ಇಂದ್ರಲೋಕ, ಬ್ರಹ್ಮಲೋಕ ಎಲ್ಲಾವನ್ನು ತಪ್ಪದೆ ತಿರುಗುತ್ತಾರೆ. ಆದರೆ ಈತನಿಗೆ ಒಪ್ಪುವ ಹೆಣ್ಣು ಸಿಕ್ಕುವುದಿಲ್ಲ. ಮನೆಗೆ ಬಂದ ನೀಲಯ್ಯನಿಗೆ ಕೈಕಾಲು ತೊಳೆದು ಊಟ ಬಡಿಸುವಾಗ ಅತ್ತಿಗೆ ನಾದಿನಿಯರು ಇವನನ್ನು ಈ ರೀತಿ ಮಾತುಗಳಿಂದ ಜರಿಯುತ್ತಾರೆ.

"ಎವ್ವೆ ಎವ್ವೆ ಸುತ್ತೇಳ್ ಸೀಮೆನೆಲ್ಲ ಸುತ್ಕೊಂಡ್ ಬಂದು
ನನ್ಗೆ ತಕ್ಕಾದ ಹೆಣ್ಣು ಎಲ್ಲೂ ದೊರೀನಿಲ್ಲ ಅಂತಿದ್ದಾರಲ್ಲ
ಈ ನಮ್ಮ ಮೈದರಸು
ಎಂತೆ ಬಿದ್ರೆ ಒಳುಗ್ಲು ಚದ್ರೆ ತತ್ತಾರೋ ಕಾಣೆ
ಇವ್ನು ಮದ್ವೆ ಆದರೋ ಇಲ್ವೋ ಅದ್ನೂ ಮೊದುಲ್ ಕಾಣೋ"[೧]

ಈ ಮಾತಿನಿಂದ ಕೋಪಗೊಂಡ ನೀಲೇಗೌಡ ಹಲ್ಲು ಹಲ್ಲು ಕಡಿಯುತ್ತಾನೆ. ನಾನು ಚೆಲುವೆಯಾದ ಹೆಣ್ಣನ್ನೇ ಮದುವೆ ಆಗಬೇಕು ಎಂದು ನಿರ್ಧರಿಸುತ್ತಾನೆ. ಇಲ್ಲದಿದ್ದರೆ ಈ ಜನ್ಮದಲ್ಲಿ ಮದುವೆಯೇ ಬೇಡ ಎನ್ನುತ್ತಾನೆ. ರಾತ್ರಿಯೆಲ್ಲಾ ಇದೇ ಚಿಂತೆಯಲ್ಲಿ ಮುಳುಗಿ, ಸೂರ್ಯೋದಯವಾದ ತಕ್ಷಣ ಎಮ್ಮೆ, ದನಗಳನ್ನು ಕಾಡಿಗೆ ಬುಟ್ಟುಕೊಂಡು, ಹಿಟ್ಟು ಹುರುಳಿಕಾಳನ್ನು ಕಟ್ಕೊಂಡು ಕಾಣಬಾರದ ಕಾಡಿಗೆ ಬರುತ್ತಾನೆ. ಮಲೆನಾಡ ಪ್ರದೇಶದಲ್ಲಿ ದನಗಳನ್ನು ಮೇಯಿಸುವಾಗ ಅಲ್ಲಿ ಅವನಿಗೆ ದಾಹವಾಗುತ್ತದೆ, ಕುಡಿಯಲು ನೀರು ಸಿಗುವುದಿಲ್ಲ. ಸುತ್ತಾ ಮುತ್ತಾ ಹುಡುಕಿದರು ನೀರು ಇಲ್ಲದೆ, ಕಲ್ಲಿನ ಬಂಡೆಯ ಮೇಲೆ ನೀಲಯ್ಯ ಕುಳಿತುಕೊಳ್ಳುತ್ತಾನೆ. ಅವನಿಗೆ ತುಂಬೇ ಸ್ವಾಲಿಗರ ಪೋಡು ಕಾಣಿಸುತ್ತದೆ. ಆ ದೊಡ್ಡಿಯಲ್ಲಿ ಒಂದು ಚಿಕ್ಕ ಗಾತ್ರದ ಹೊಗೆ ಬರುವುದನ್ನು ಗಮನಿಸುತ್ತಾನೆ. ಆ ದೊಡ್ಡೀಲಿ ನೀರು ಕುಡಿಬೇಕು ಅಂತ ಆ ಪೋಡಿಗೆ ಹೋಗುತ್ತಾನೆ.

ಆ ದೊಡ್ಡಿಯಲ್ಲಿ ತುಂಬೇ ಸೋಲಿಗ ಅತ್ಯಂತ ವೈಭವದಿಂದ ಬಾಳಾಟ ಮಾಡುತ್ತಿರುತ್ತಾನೆ. ನೀಲೇಗೌಡ ಮನೆ ಬಾಗಿಲಿಗೆ ಬಂದಾಗ, ಅಲ್ಲಿ ಕುಳಿತಿರುವವರನ್ನು ಕುರಿತು, ನಾನು ಸ್ವಾಮಿ ಯಜಮಾನ್ರೆ! ಕಾಡುಸೋಲಿಗ ನೀಲೇಗೌಡನ ಮಗ ಮಲೆಯ ಸ್ವಾಲಿಗ ಅನ್ನುತ್ತಾನೆ. ನನಗೆ ದಾಹ ಆಗಿದೆ ಕುಡಿಯೋಕೆ ನೀರು ಬೇಕು ಎಂದು ಕೇಳುತ್ತಾನೆ. ಬಾರೋ ನನಕಂದ ಸತ್ಯಭಾವ ಸಂಕಮ್ಮ ಯಾರೋ ಕಾಣೆ ಒಂದ್ಹುಡ್ಗ ಬಂದು ನೀರು ಕೇಳುತ್ತಾನೆ, ನೀರು ಕೊಡು ಎನ್ನುತ್ತಾನೆ. ಸಂಕಮ್ಮ ತಾಮ್ರದ ಚಂಬಿನಲ್ಲಿ ನೀರು ಕೊಡುತ್ತಾಳೆ. ಆ ನೀರನ್ನು ಕುಡಿದು ದಾಹ ಇಂಗಿಸಿಕೊಳ್ಳುತ್ತಾನೆ.

---

೧. ಮಲೆಯ ಮಾದೇಶ್ವರ, ಪಿ.ಕೆ.ರಾಜಶೇಖರ, ಪುಟ – ೫೧೩.

ಅವಳು ರನ್ನದ ಸಿಂಬಿ ಎತ್ತಿ ನೆತ್ತೀಮ್ಯಾಲ್ಮಡೀಕೊಂಡು, ಚಿನ್ನದ ಬಿಂದಿಗೆಯನ್ನು ಹೊತ್ಕೊಂಡು ಅಡ್ಡಾಡುತ್ತಾ ನೀರಿಗೆ ಬರುವಾಗ ನೀಲೇಗೌಡ ಅವಳ ಚೆಲುವಿಗೆ ಸೋಲುತ್ತಾನೆ. ಅವಳು ಎಷ್ಟು ಸುಂದರವಾಗಿದ್ದ ಎಂಬುದಕ್ಕೆ ಈ ಕೆಳಗಿನ ಪದ್ಯ ಸಾಕ್ಷಿಯಾಗಿದೆ.

"ಅವುಳಂದಾ ಚಂದ ನೋಡುವುನೆ
ಚಂದಾ ಜಾರ ನೋಡವ್ನೆ
ಚೆಲುವ ಭಾವ ನೋಡವ್ನೆ
ಸುದ್ದಾ ಸುಳಿಯ ನೋಡವ್ನೆ
ನಡುಗೆ ನುಡಿಗೆ ನೋಡವ್ನೆ
ಮಂಡೆ ಭಾವ ನೋಡವ್ನೆ
ಕೆಂಪೂ ರಂಪಾ ನೋಡವ್ನೆ
ಸಂಕಮ್ಮ ನನ್ನೆ ಮೆಚ್ಚುವುನಲ್ಲೋ"[೧]

ಮತ್ತೆ ಸಾಯಂಕಾಲ ನೀಲೇಗೌಡ ಮನೆಗೆ ದನಗಳನ್ನು ತಂದು ಕೂಡಿಹಾಕಿ, ತನ್ನ ತಂದೆ-ತಾಯಿಯರ ಜೊತೆಗೆ ಈ ಸಂಕಮ್ಮನ ವಿಚಾರವನ್ನು ಪ್ರಸ್ತಾಪಿಸುತ್ತಾನೆ. ಆಗ ತಾಯಿ ನಂಜಮ್ಮ ನೀನು ಯಾವ ಹೆಣ್ಣನ್ನು ಒಪ್ಪುತ್ತಿರಲಿಲ್ಲ, ಆದರೆ ಆ ಮಲೆನಾಡ ಸೀಮೆ ಹೆಣ್ಣನ್ನು ಒಪ್ಪಿಕೊಂಡಿದ್ದೀಯಾ! ನಿನ್ನ ಇಷ್ಟದಂತೆ ಆಗಲಿ ಅನ್ನುತ್ತಾಳೆ. ೫ ಜನ ಮುತ್ತೈದೆಯರ ಜೊತೆ ಸಂಕಮ್ಮನನ್ನು ಹೆಣ್ಣು ನೋಡಲು ನಂಜಮ್ಮ ತುಂಬೇ ಸೋಲಿಗನ ದೊಡ್ಡಿಗೆ ಬರುತ್ತಾರೆ. ಹೆಣ್ಣನ್ನು ಕೊಡಲು ಒಪ್ಪಿಕೊಳ್ಳುತ್ತಾರೆ. ನಾನು ನಿಮ್ಮ ಮನೆಗೆ ಕೊಟ್ಟಾಗ ಹೆಣ್ಣುಮಗಳನ್ನು ಚೆನ್ನಾಗಿ ನೋಡಿಕೊಳ್ಳಬೇಕು ಎಂದು ಅವರ ತಂದೆ ನಂಜಮ್ಮನಿಗೆ ಹೇಳುತ್ತಾನೆ. ಅದಕ್ಕೆ ಒಪ್ಪಿ ಹೆಣ್ಣಿನ ಕಡೆಯೋರು ಮತ್ತು ಗಂಡಿನ ಕಡೇಯೋರು ಒಪ್ಪಿಳ್ಯಶಾಸ್ತ್ರ ಮಾಡುತ್ತಾರೆ. ಕುಲದವರು, ಮತದವರು, ಜಾತಿ-ಯವರನ್ನೆಲ್ಲಾ ವಿವಾಹಕ್ಕೆ ಕರೆದಿದ್ದಾರೆ, ಮದುವೆಯಲ್ಲಿ ಶಾಸ್ತ್ರಗಳನ್ನು ಮಾಡುತ್ತಾರೆ. ಸೋಲಿಗ ಸಂಪ್ರದಾಯದಲ್ಲಿ ರೂಢಿಗತವಾಗಿ ಬಂದಿರುವ ಶಾಸ್ತ್ರ ಸಂಪ್ರದಾಯವನ್ನೇ ಆಚರಿಸುತ್ತಾರೆ. ಅರಿಶಿನ ಬಾಳೆಹಣ್ಣಿನಶಾಸ್ತ್ರ ಸೀತಾಳದಿಂದ ಚಪ್ಪರ ಹಾಕಿಸಿದ್ದಾರೆ. ೧೨ ಕಂಬಗಳನ್ನು ನೆಟ್ಟಿದ್ದಾರೆ. ಮಡಿವಾಳ ಮಾಚಯ್ಯ ಮಡಿಬಟ್ಟೆಯನ್ನು ಚಪ್ಪರಕ್ಕೆ ಕಟ್ಟಿದ್ದಾನೆ. ನಡೆಹಾಸನ್ನು ಹಾಸಿದ್ದಾನೆ. ಕುಂಬಾರ ಗುಂಡಯ್ಯ ಒಂದು ಗಡಿಗೆಯನ್ನು ಕೊಟ್ಟಿದ್ದಾನೆ, ಕೆಲ್ಸಿ (ಹಜಾಮ) ರಂಗಯ್ಯ ಬಾಸಿಂಗವನ್ನು ತಯಾರಿಸಿದ್ದಾನೆ. ಕುರುಬರ ಬೀರಯ್ಯ ಒಂದು ದಾರವನ್ನು ಕೊಡುತ್ತಾನೆ. ಪರಿವಾರದ ಚೌಡಯ್ಯ ವಿಳ್ಯೆದೆಲೆ

---

೧. ಮಲೆಯ ಮಾದೇಶ್ವರ, ಪಿ.ಕೆ.ರಾಜಶೇಖರ, ಪುಟ ೫೧೬(೨೬೦).

ನೀಡಿದ್ದಾನೆ. ಹೊಲೇರ ಹೊನ್ನಯ್ಯ ವಾದ್ಯ ಮಾಡುತ್ತಾನೆ. ೫ ಕೊಂಬಿನ ಅರಿಶಿನ ತಂದಿದ್ದಾರೆ, ಕಬ್ಬಿಣದ ಉಂಗುರ ತಂದಿದ್ದಾರೆ. ಆಕಾಶವೇ ಚಪ್ಪರ, ಭೂಮಿಯೇ ಹಸೆಮಣೆ ಗಂಗಮ್ಮ, ಗೌರಮ್ಮ ಸೇರಕ್ಕಿಯನ್ನು ಕೊಟ್ಟಿದ್ದಾರೆ, ಸರಸ್ವತಿ ಸೋಬಾನೆ ಹಾಡುತ್ತಾಳೆ, ಲಕ್ಷ್ಮಿದೇವಿ ಅಕ್ಷತೆಕಾಳನ್ನು ಹಾಕುತ್ತಾಳೆ, ಬಾರಿ ದೋಯಿಸರು ಧಾರೆ ಎರೆದಿದ್ದಾರೆ, ಕಂಬಶಾಸ್ತ್ರ, ಗುಂಬಶಾಸ್ತ್ರವನ್ನು ಮಾಡಿಸಿದ್ದಾರೆ. ಹೆಣ್ಣುಗಂಡಿನ ಹೆಸರನ್ನು ಹೇಳಿಸುತ್ತಾರೆ. ಅವನನ್ನು ಕುದುರೆಮ್ಯಾಲೆ, ಇವಳನ್ನು ಬಸವನ ಮ್ಯಾಲೆ ಕೂರಿಸಿ ಮೆರವಣಿಗೆ ಮಾಡುತ್ತಾರೆ. ಹೀಗೆ ಮದುವೆ ನೀಲಯ್ಯ ಮತ್ತು ಸಂಕಮ್ಮರಿಗೆ ನಡೆಯುತ್ತದೆ.



ಈ ವಿವಾಹದಿಂದ ತಿಳಿದುಬರುವ ಅಂಶವೇನೆಂದರೆ ಸೋಲಿಗ ಜನಾಂಗದವರು ವಿವಾಹವಾಗುವ ರೀತಿ-ನೀತಿಗಳನ್ನು ತಿಳಿಸುತ್ತದೆ. ಹಾಗೆಯೇ ಅವರಲ್ಲಿರುವ ಆಚಾರ, ಸಂಪ್ರದಾಯಗಳು ಹಾಗೂ ಎಲ್ಲಾ ಜಾತಿಯವರ ವೃತ್ತಿಗಳನ್ನು ತಿಳಿಸುತ್ತವೆ. ಅವರವರಿಗೆ ಸೀಮಿತಗೊಂಡಿರುವ ವೃತ್ತಿಗಳನ್ನು ಪರಿಚಯಿಸುತ್ತದೆ. ಜನಪದರಲ್ಲಿ ಇಂತಹ ಒಂದು ಸಂಸ್ಕೃತಿ, ಸಂಪ್ರದಾಯಗಳು ಇಂದಿಗೂ ಕೂಡ ಇದೆ. ವಾಸ್ತವವಾಗಿ ಮದುವೆಗಳು ಇದೇ ರೀತಿ ನಡೆಯುವುದನ್ನು ಕಾಣುತ್ತೇವೆ.

ಸೋಲಿಗರಲ್ಲಿ ಹೆಣ್ಣು ನೋಡುವ ವಿಧಾನ, ಶಾಸ್ತ್ರಗಳು ಮತ್ತು ತಮ್ಮ ಕುಲದವರು, ಜಾತಿಯವರೆಲ್ಲಾ ಒಟ್ಟಾಗಿ ಸೇರಿ ಮದುವೆ ಮಾಡುವುದು ಮತ್ತು ತಮ್ಮಲ್ಲೇ ದೊರಕುವ ವಸ್ತುಗಳನ್ನು ಬಳಸಿ ಶಾಸ್ತ್ರಗಳನ್ನು ಮಾಡುತ್ತಾರೆ. ಕಾಡಿನಲ್ಲೇ ದೊರಕುವ ವಸ್ತುಗಳಿಂದಲೇ ಎಲ್ಲಾ ವಿಧಿ-ವಿಧಾನಗಳನ್ನು ಅನುಸರಿಸುವುದು ಕಂಡುಬರುತ್ತದೆ.

**ನೀಲಯ್ಯ ಸಂಕಮ್ಮನಿಗೆ ಮನೆನಿರ್ಮಾಣ ಮಾಡುವುದು**

ನೀಲಯ್ಯ ಪ್ರತಿನಿತ್ಯದಂತೆ ಕಾಡಿಗೆ ದನಗಳನ್ನು ಮೇಯಿಸಲು ಹೊರಟು ಹೋದಾಗ ಈತನ ಅಣ್ಣಂದಿರ ಹೆಂಡತಿಯರು, ಈ ಚೆಲುವೆಯಾದ ಸಂಕಮ್ಮನನ್ನು ಮಕ್ಕಳಿಲ್ಲದ ಬಂಜೆ ಎಂದು ಜರಿಯುತ್ತಿದ್ದರು. ಹೇಗೆ ಜರಿಯುತ್ತಿದ್ದರು ಎಂದರೆ ಈ ಕೆಳಗಿನ ಪದ್ಯದಲ್ಲಿರುವಂತೆ

ಕುಂತ್ ಜಾಗುಕ್ಕೆ ಇವುಳ್ಗೆ ನೀರ್ತಂದ್ ಕೊಡ್ಬೇಕಲ್ಲ
ನಿಂತ್ ಜಾಗುಕ್ಕೆ ಇವುಳ್ಗೆ ನೀರ್ತಂದ್ ಕೊಡ್ಬೇಕಲ್ಲ
ಎಂತ ಕಾಗೆ ಮೊಕದೋಳ್ ಗೂಗೆ ಮೊಕುದೋಳ್ ತಂದ[೧]

೧. ಮಲೆಯ ಮಾದೇಶ್ವರ, ಪಿ.ಕೆ.ರಾಜಶೇಖರ, ಪುಟ - ೫೨೬(೩೦).

ಇವಳು ಹುಟ್ಟಿ ೩೦ ವರ್ಷವಾಯ್ತು. ಮೈಯ ಬಣ್ಣ ಕೆಡಲಿಲ್ಲ, ಮುಖದ ಕಾಂತಿ ಕೆಡಲಿಲ್ಲ. ಮಕ್ಕಳ ಫಲವೇ ಮೊದಲು ಇವಳಿಗಿಲ್ಲ. ಇವ್ಳು ಅಟ್ಟರೆ ನಾವು ಉಣ್ಣುವುದು ಬೇಡ ಎನ್ನುತ್ತಿದ್ದರು. ನಾವು ಕೂಡ ಬಂಜೆರಾಯ್ತೀವಿ ಎಂಬ ಭಾವನೆ ಇತ್ತು. ಅಂದರೆ ಹೆಣ್ಣಿನ ಬಗ್ಗೆ ಒಂದು ಹೆಣ್ಣಿಗೆ ಎಷ್ಟು ಮತ್ಸರವಿದೆ. ಹಾಗೆಯೇ ಇವತ್ತಿಗೂ ಸಹ ತುಂಬಿದ ಕುಟುಂಬಗಳಲ್ಲಿ ಇದು ಸಹಜವಾಗಿ ಕಂಡುಬರುತ್ತದೆ. 'ಹೆಣ್ಣಿಗೆ ಹೆಣ್ಣೇ ವೈರಿ' ಎಂಬ ಭಾವನೆ ಮೂಡುತ್ತದೆ. ವಾರ್‍ವಾರ್ ಗೀತ್ತೀರು ನಮ್ಮ ಮಕ್ಕಳನ್ನು ಈ ಬಂಜೆ ಮುಟ್ಟಿದರೆ ಇವರು ಕೂಡ ಬಂಜೆಯಾಗುತ್ತಾರೆ ಎಂದು ಹುಟ್ಟು ಬಂಜೆ ಎಂದು ಜರಿಯುತ್ತಾರೆ. ಇವಳ ಸಂಗಡ ನೀರಿಗೆ, ಸೌದೆಗೆ ಹೋಗಬಾರ್ದು ಅಂತ ಹೇಳಿ ಈ ಕೆಳಗಿನಂತೆ ಮಾತಾಡಿಕೊಳ್ಳುತ್ತಾರೆ.

"ಹರಹರಾ ವಾರ್‍ವಾರ್‌ಗಿತ್ತೀರು ಸೇರ್‍ಕೊಂಡು
ಸತ್ಯುವಂತೆ ಸತ್ಯುಭಾವೆ ಸತ್ಯುಸರಣೆ ಸಂಕಮ್ಮನವುರ್‍ನ
ಹೊಟ್ಟೀಲಿ ಮಕ್ಳಿಲ್ಲ ಕಟೀಲಿ ನಈರಿಲ್ಲ
ಹುಟ್ಟು ಬಂಜೆ ದಟ್ಟ ಧರಣಿ
ಇವುಳ್ ತಿರುಗಾಡುವಂತ ಸ್ಥಳದಲ್ಲಿ
ನಾವು ನಮ್ಮಕ್ಳು ನಮ್ ಗಂಡ್ದೀರು ತಿರುಗಾಡುದ್ರೆ
ನಾವು ಬಂಜೆರಾಯ್ತೀನಿ ನಮ್ಮಕ್ಳು ಬಂಜೆರಾಯ್ತರೆ ನಮ ಗಂಡ್ದೀರು
ಬಂಜೆರಾಯ್ತರೆ ಎಂಬುದಾಗಿ
ಸಂಕಮ್ಮನ ಮೊಕುವ ನೋಡಿ ನೋಡಿ
ಜರಿತಾರಲ್ಲೋ ಮಾದೇವ ।ಕ್ವಾರಣ್ಯ।[೧]

ನೀಲಯ್ಯ ದನಕಾಯ್ದು ಮನೆ ಬಂದಾಗ, ಅವನಿಗೆ ನೀರು ಕೊಡಲು ಸಂಕಮ್ಮ ಬರುವುದಿಲ್ಲ. ಇದನ್ನು ಗಮನಿಸಿದ ನೀಲಯ್ಯ ಸಂಕೆಣ್ಣೆ, ಸಂಕೆಣ್ಣೆ ಸಂಕೆಣ್ಣೆ ಎಂದು ೩ ಬಾರಿ ಕೂಗುತ್ತಾನೆ. ಮಾತಾಡದೆ ಬಂದು ಸಂಕಮ್ಮ ಬಾಗಿಲು ತೆಗೆಯುತ್ತಾಳೆ. ಈ ಪಾಪಿಯ ಮುಖವನ್ನು ನೋಡಬ್ಯಾಡಿ ಎಂದು ಚಿಂತೆಯಿಂದ ಹೋಗಿ ಮಲಗುತ್ತಾಳೆ.

ಇದರಿಂದ ಬೇಸತ್ತ ನೀಲಯ್ಯ ನನ್ನ ಅಣ್ಣತಮ್ಮಂದರು ಮತ್ತು ತಂದೆತಾಯಿಗಳು ಮತ್ತು ನನ್ನ ಅತ್ತಿಗೆ–ನಾದಿನಿಯರು ಏನಾದರು ಬೈಯಿದಿರಬೇಕೆಂದು ಮಡದಿ ಹತ್ತಿರಕ್ಕೆ ಬಂದು ಕೇಳುತ್ತಾನೆ. ಆವಾಗ ನಡೆದ ಸಂಗತಿಯನ್ನು ತಿಳಿಸುತ್ತಾಳೆ. ಸಂಕಮ್ಮ ನೀಲಯ್ಯನಿಗೆ, ಅಯ್ಯಾ! ಯಜಮಾನ ನಿನ್ನ ಅತ್ತಿಗೆಯರು ನನ್ನ ಹುಟ್ಟು ಬಂಜೆ ಎಂದು

೧. ಮಲೆಯ ಮಾದೇಶ್ವರ, ಪಿ.ಕೆ.ರಾಜಶೇಖರ, ಪುಟ ೫೨೬(೬೦).

ಹೀಯ್ಯಾಳಿಸಿದರು ಎಂಬುದಾಗಿ ತಿಳಿಸುತ್ತಾಳೆ. ಇದರಿಂದ ದುಃಖವನ್ನು ತಡಿಲಾರದೆ ನಾನು ಮಲಗಿದ್ದೆ ಎನ್ನುತ್ತಾಳೆ. "ನಿನಗಂದ ಮಾತು ನನಗಲ್ವ ನನಗಂದ ಮಾತು ನಿನಗಲ್ವ? ಇವರ್‍ಜೊತೆ ಯಾಕೆ ಒಗ್ತಾನ ಮಾಡ್ಬೇಕು ಸಂಕೆಣ್ಣೆ"[೧] ಎಂದು ತನ್ನ ಭಾಗವನ್ನು ಕೇಳುತ್ತಾನೆ. ಆದ್ದರಿಂದ ಬೇಸತ್ತ ತಂದೆ-ತಾಯಿ, ಅಣ್ಣ-ತಮ್ಮಂದಿರೆಲ್ಲಾ ಬುದ್ಧಿವಾದ ಹೇಳಿದರು. ಮಲೆಯ ಸೋಲುಗ ನೀಲಯ್ಯ ಕೇಳುವುದಿಲ್ಲ. ತನ್ನ ಪಾಲನ್ನು ತೆಗೆದುಕೊಂಡು, ಅವನು ಸಂಕಮ್ಮನನ್ನು ಯಾರು ಕಾಣದ ಕಾಡಿಗೆ ಕರೆದುಕೊಂಡು ಬಂದು ಮೂರು ಕೂಡಿದ ಬೆಟ್ಟದ ತಪ್ಪಲಿನಲ್ಲಿ ಮುಸುಕಿದ ಬೆಟ್ಟದ ಅಡಿಯಲ್ಲಿ ಕೂಕ್ಕೂರೆ ಕೊನೆ ಬೋಳಿಯಲ್ ಮಾಳದ ಬೆಟ್ಟಕ್ಕೆ ಬರುತ್ತಾನೆ. ಅಲ್ಲಿ ಒಂದು ಆಲದ ಬುಡವನ್ನು ಕತ್ತರಿಸುತ್ತಾನೆ. ತೇಗು, ಹೊನ್ನೆ, ಕಕ್ಕೆ ಮರಗಳನ್ನು ಕಡಿದು ಒಂದು ಒಂಟಿ ದೊಡ್ಡಿಯನ್ನು ಕಟ್ಟುತ್ತಾನೆ. ಆ ಒಂಟಿ ದೊಡ್ಡಿಯಲ್ಲಿ ಒಂದು ಸೊಪ್ಪಿನ ಗುಡಿಸಲನ್ನು ಕಟ್ಟುತ್ತಾನೆ. ಈ ಗುಡಿಸಲಲ್ಲೆ ಇಬ್ಬರು ಸಂಸಾರವನ್ನು ಹೂಡುತ್ತಾರೆ. ಇಂದಿಗೂ ಸಹ ಸೋಲಿಗ ಜನಾಂಗದವರು ಇಂತಹ ಸೊಪ್ಪಿನ ಗುಡಿಸಲಲ್ಲೆ ವಾಸವಾಗಿರುವುದು ಕಂಡುಬರುತ್ತದೆ.

**ನೀಲೇಗೌಡ ಕುಲದವರ ಜೊತೆ ಬೇಟೆಗೆ ಹೋಗುವುದು**

ಸೋಲಿಗರ ಕುಲದಲ್ಲಿ ಬೇಟೆಯಾಡುವ ಪದ್ಧತಿ ಇಂದಿಗೂ ಸಹ ಇದೆ. ಅಂದಿನ ಕಾಲದಲ್ಲೂ ಇತ್ತು. ಇವರು ಜಾತ್ರೆಗೆ ಹಲವಾರು ಪದಾರ್ಥಗಳನ್ನು ತೆಗೆದುಕೊಂಡು ಹೋಗುವುದು ರೂಢಿಯಾಗಿದೆ. ಒಂದು ದಿನ ಸೋಲಿಗರ ಜಾತಿಯವರೆಲ್ಲಾ ಯಜಮಾನನ ಸಮ್ಮುಖದಲ್ಲಿ ಮಂದಾರಕಟ್ಟೆ ಎಂಬಲ್ಲಿ ಪಂಚಾಯ್ತಿ ಸೇರಿ ಬೇಟೆಗೆ ಹೋಗುವ ನಿರ್ಧಾರ ಮಾಡುತ್ತಾರೆ. ಅವರ ಕುಲಕಸುಬಿನಂತೆ. ವರ್ಷಕ್ಕೆ ಒಂದು ಬಾರಿ ಬೇಟೆಯಾಡುವುದು ಇವರ ಪದ್ಧತಿಯಾಗಿದೆ. ಜಾತ್ರೆಗೆ, ಬಿದಿರಕ್ಕಿ, ಬೆಲ್ಲಗೆಣಸು, ಕಜ್ಜೂರದ ಹಣ್ಣು, ಕಟ್ಟೇನೀರು, ಮದರಂಗನ ಬಾಳೆಹಣ್ಣು, ಹೆಜ್ಜೇನು ತುಪ್ಪ ಇಷ್ಟೆಲ್ಲಾ ಬೇಕು ಎಂದು ಊರಿನವರೆಲ್ಲಾ ಸೇರಿಕೊಂಡು ನ್ಯಾಯಪಂಚಾಯ್ತಿಯಲ್ಲಿ ತೀರ್ಮಾನವಾಗುತ್ತದೆ. ಪ್ರತಿಯೊಂದು ಹಟ್ಟಿಯಿಂದ ಒಂದು ಆಳು ಬರುವುದು ೩ ತಿಂಗಳ ಪಯಣ, ೩ ತಿಂಗಳು ಅಲ್ಲಿರುವುದು ಮತ್ತು ೩ ತಿಂಗಳು ವಾಪಸ್ಸು ಬರುವುದು ಒಟ್ಟು ಒಂಬತ್ತು ತಿಂಗಳು ಒಂಬತ್ತು ದಿನ ಇರಬೇಕು ಎಂದು ಹೇಳುತ್ತಾರೆ. ಅಲ್ಲಿಗೆ ನೀಲೇಗೌಡ ಬಂದಿರುವುದಿಲ್ಲ. ಆದ್ದರಿಂದ ಅಲ್ಲಿದ್ದಂತಹ 'ಕೋಲ್ಕಾರ'ನಿಂದ ಅವನನ್ನು ಕರೆಯಿಸುತ್ತಾರೆ.

---

೧. ಮಲೆಯ ಮಾದೇಶ್ವರ, ಪಿ.ಕೆ.ರಾಜಶೇಖರ, ಪುಟ ೫೩೩.

ಈತ ದನ ಕುರಿ ಹೊಡ್ಕೊಂಡು ತನ್ನ ಪೋಡಿಗೆ ಬಂದಾಗ ಹೆಂಡತಿ ಕೋಲ್ಕಾರಣ್ಣ ಬಂದಿದ್ದ ವಿಷಯ ತಿಳಿಸುತ್ತಾಳೆ. ಆಹಾ! ಸಂಕೆಣ್ಣೆ ಕುಲ ಅನ್ನೋದು ಬಹಳ ದೊಡ್ಡದು. ಪಂಚಾಯ್ತಿಗೆ ಈವಾಗಲೂ ಸಹ ಸೋಲಿಗರು ಹೆದರುತ್ತಾರೆ. ಕಾರಣ ಅವರಲ್ಲಿರುವ ಒಗಟ್ಟೆಂದು ಭಾವಿಸಬಹುದಾಗಿದೆ. ಈತನನ್ನು ಕರೆದು ದೊಡ್ಡೆಜಮಾನ್ರು ಬೇಟೆಗೆ ಹೋಗುವ ವಿಷಯವನ್ನು ತಿಳಿಸುತ್ತಾರೆ. ಇದರಿಂದ ನೀಲೇಗೌಡ ನನ್ನ ಹೆಂಡ್ತಿ ಒಬ್ಬಳೆ ಇರುತ್ತಾಳೆ. ನನ್ನ ದಾಯಾದಿಗಳಿಗೆ ಹೊಟ್ಟೆಕಿಚ್ಚು, ಅಣ್ಣಂದಿರಿಗೆಲ್ಲಾ ಹೊಟ್ಟೆಕಿಚ್ಚು ಅದರಿಂದ ನಾನು ನಿಮಗೆ ೨ ಪಟ್ಟು ಹಣಕೊಡ್ತೀನಿ ಅಂದಾಗ ಅಲ್ಲಿದ್ದ ಇನ್ನೊಬ್ಬ ನಾನು ಒಬ್ಬನೆ ನಾನು ನಾಲ್ಕಣ ಕೊಡ್ತೀನಿ ಎಂದು ಹೇಳುತ್ತಾನೆ. ಇದು ಪಂಚಾಯ್ತಿಯಲ್ಲಿ ಇವತ್ತಿಗೂ ನಡೆಯುವ ಮಾತುಕತೆಗೆ ಸಾಕ್ಷಿಯಾಗಿದೆ. ನೀಲೇಗೌಡ ಇದರಿಂದ ಬೇಸತ್ತು ಕುಲಕ್ಕೆ ಪ್ರತಿಯಾಗಿ ಮಾತಾಡದೇ ಹೆಜ್ಜೇನು ಮಲೆಗೆ ಹೋಗಲು ಒಪ್ಪಿಕೊಳ್ಳುತ್ತಾನೆ. ನನ್ನ ಹೆಂಡತಿಗೆ ಬುದ್ಧಿಮಾತು ಹೇಳಿ ಬರುತ್ತೇನೆ ಎಂದು ನೀಲಯ್ಯ ದುಃಖದಿಂದ ಮನೆಗೆ ಬರುತ್ತಾನೆ.

ನೀಲಯ್ಯ ಹಗ್ಗದ ಬಲೆಯ ತಕ್ಕಂಡು, ಗುಗ್ಗರಿಗಂಟು ಹಿಡಿದು ಕುರುಬ ಒಕ್ಕಲಗೌಡ ಜಾತೀಲಿ ಸೋಲಿಗ ನೀಲಯ್ಯ ಹೆಂಡ್ತಿ ಹತ್ತಿರಕ್ಕೆ ಬಹಳ ಚಿಂತೆಯಿಂದ ಹೋಗಿ ಪಂಚಾಯ್ತಿಯಲ್ಲಿ ನಡೆದ ತೀರ್ಮಾನದ ವಿಷಯವನ್ನು ಹೇಳುತ್ತಾನೆ. ನಾನು ತಪ್ಪದೆ ಬರುತ್ತೇನೆಂದು ಮಾತುಕೊಟ್ಟಿದ್ದೇನೆ ಎಂದಾಗ ಸಂಕಮ್ಮ ಏಳೋದು "ವನಾ ಮೀರಿದ ಪಕ್ಷಿ ಕುಲಾ ಮೀರಿದ ಮನುಸ ಎರಡೂ ಒಂದಲ್ವ ಸ್ವಾಮಿ"[೧] ಈ ರೀತಿ ಹೇಳಿದಾಗ ಹೇಗೆ ನಿನ್ನೆ ನಂಬಲಿ ನಾನು ಎಂದು ನೀಲಯ್ಯ ಅನುಮಾನ ಪಟ್ಟು, ಭಾಷೆಯನ್ನು ಕೊಡು ಎಂದು ಕೇಳುತ್ತಾನೆ. ಇದರಿಂದ ಕೋಪಗೊಂಡ ನಾನು ಏನು ತಪ್ಪು ಮಾಡಿಲ್ಲದಿದ್ದರೂ ಈ ರೀತಿ ಸಂಶಯದ ಮಾತನ್ನು ಹೇಳುತ್ತಿದ್ದೀರಲ್ಲಾ ಎಂದಾಗ ಅತ್ಯಂತ ಚೆಲುವೆಯಾದ ಮಡದಿಯನ್ನು ಬಿಡಲು ಅವನಿಗೆ ಸಂಕಟವಾಗುತ್ತದೆ.

ಕಾಡು ಸೋಲಿಗ ನೀಲಯ್ಯ ಮಡದಿಯ ಅಂದ ಚಎಂದಗಳನ್ನು ನೋಡಿದ, ಸುಳಿ ಶುದ್ಧ ನೋಡಿದ; ಕೆಂಪು ರೂಪ ನೋಡಿ; ಉದ್ದ ಭೂಷಣ ನೋಡಿದ; ಹೀಗೆ ಮಡದಿಯ ಚಂದವನ್ನು ವೀಕ್ಷಿಸಿಸಿ

**ನೀಲಯ್ಯ:** ಸತ್ಯ ಶರಣೆ ಸಂಕಣ್ಣೆ ನಿನ್ನ ತುಟಿಯ ಭಾವ ನೋಡಿದರೆ ತೊಂಡೆ ಹಣ್ಣಿನ ನೆನಪಾಗುತ್ತದೆ. ಹಲ್ಲಿನ ಭಾವ ನೋಡಿದರೆ ದಾಳಿಂಬೆ ಬೀಜದ ನೆನಪಾಗುತ್ತದೆ. ಹಣೆಯ ಭಾವ ನೋಡಿದರೆ ಅಪರಂಜಿಯ ಹೊಳಪಿನ ನೆನಪಾಗುತ್ತದೆ. ಹುಬ್ಬಿನ ಭಾವ ನೋಡಿದರೆ ಕಬ್ಬಿನಗರಿಯ ನೆನಪಾಗುತ್ತದೆ. ನಾನು ಕಾಡಿಗೆ ಹೋದ ಮೇಲೆ ಈ

---

೧. ಮಲೆಯ ಮಾದೇಶ್ವರ, ಪಿ.ಕೆ.ರಾಜಶೇಖರ, ಪುಟ – ೫೨೬(೬೦).

ಗುಡಿಸಲು (ಗುಳ್ಳಿಗೆ) ಎಮ್ಮೆ ಎತ್ತುಗಳನ್ನು ಹೊಡೆದುಕೊಂಡು ನಿನ್ನ ಮಾವನ ಮಕ್ಕಳು ಬರಬಹುದು, ನಿನ್ನ ಮೈದುನರು ಬರಬಹುದು, ಅವರು ಬಂದು ಬೆಂಕಿಯನ್ನೋ ನೀರನ್ನೋ ಕೇಳಿ, ನಿನ್ನನ್ನು ಮೋಹಿಸಬಹುದು. ನೀನು ಅವರ ಜೊತೆಯಲ್ಲಿ ಹೋಗಿ ನನ್ನ ಮರ್ಯಾದೆ ಮಣ್ಣು ಪಾಲು ಮಾಡುವೆಯಾ? ಈ ರೀತಿ ಹೇಳಿದಾಗ

ಸಂಕಮ್ಮ ಯಜಮಾನರೇ, ನನ್ನ ಕಳ್ಳತನವನ್ನು ಹಿಡಿಯಬೇಕಾದರೆ ಪ್ರತ್ಯಕ್ಷ ನೋಡಬೇಕು. ಬರಿದೆ ಸಂಶಯದಿಂದ ಆಡಬಾರುದು ಎಂದು ಹೇಳಿದಾಗ ನೀಲಯ್ಯ ಮಡದಿಯನ್ನು ನಿಂದಿಸುತ್ತಾನೆ. ನನ್ನ ಸೊಪ್ಪಿನ ಗುಡಿಸಲಿಗೆ ಯಾರಾದರೂ ಬಂದೇ ಬರುತ್ತಾರೆ. ದಾನ ಬೇಡುವ ಜೋಗಿಗಳು, ಬುಡಬುಡಕೆಯವರು, ತಿರುಕರು ಯಾರಾದರೂ ಬಂದೇ ಬರುವರು. ನಾನು ಹೇಳಿದ ಹಾಗೆ ಕೇಳಿ ನಿನ್ನ ಜೀವಕ್ಕೆ ಬುದ್ಧಿ ಹೇಳು ಎನ್ನುತ್ತಾನೆ. ನಾನಿಲ್ಲದ ವೇಳೆಯಲ್ಲಿ ಬಳೆಗಾರ ಶೆಟ್ಟಿ ಬರಬಹುದು. ಬಳೆಯನ್ನು ತೊಡಿಸಿಕೊಂಡು ಕಾಸಿಲ್ಲದಿದ್ದರೆ ಅವನ ಜೊತೆ ಹೋಗುತ್ತೀಯ ಅನ್ನುತ್ತಾನೆ. ಗುಡಿಸಲಿಗೆ ದೇವಾಂಗಶೆಟ್ಟಿ ಬರಬಹುದು. ಸೀರೆಯನ್ನು ಕೊಟ್ಟು ನಿನ್ನ ಒಲಿಸಬಹುದು. ಹಾಗೆಯೇ ಮುತ್ತಿನ ಸೆಟ್ಟಿಯು ಬಂದು ಮುತ್ತನ್ನು ಕೊಟ್ಟು ನಿನ್ನ ಕರೆದುಕೊಂಡು ಹೋಗಬಹುದು ಎಂದಾಗ ಅವಳಿಗೆ ಅತ್ಯಂತ ದುಃಖ ಉಂಟಾಗುತ್ತದೆ.

ಇದನ್ನು ನೋಡಿದ ನೀಲಯ್ಯ ಅಳುವ ಹೆಣ್ಣನ್ನು ನಂಬಬಾರದು. ಹೆಣ್ಣಿನ ಮರ್ಮ ತಿಳಿದವರಾರು ಎಂದು ಈ ರೀತಿಯಾಗಿ ಹೇಳುತ್ತಾನೆ.

ನಿನ್ನ ಬೆಳ್ಳಿಬಂಗಾರ ಕಳೆ ಹೆಣ್ಣೆ
ಮೂಗಿನ ಮೂಗುತಿ ಕಳೆ ಹೆಣ್ಣೆ
ಮಿರುಗುವ ಚೌಲಿಯ ಕಳೆ ಹೆಣ್ಣೆ
ಕತ್ತಿನ ಪದಕವ ಕಳೆ ಹೆಣ್ಣೆ
ನಡುವಿನ ಡಾಬು ಕಳೆ ಹೆಣ್ಣೆ
ಭಾಪುರಿ ಕಡಗ ಕಳೆ ಹೆಣ್ಣೆ
ಕಾಸಿನ ಪಿಲ್ಲಿಯ ಕಳೆ ಹೆಣ್ಣೆ
ನಿನ್ನ ಮೊಗ್ಗಿನ ರವಿಕೆಯ ಕಳೆ ಹೆಣ್ಣೆ
ನಿನ್ನೆ ಉಟ್ಟ ಸೀರೆಯ ಕಳೆ ಹೆಣ್ಣೆ

ಈ ಮಾತನ್ನು ಕೇಳಿ ಸಂಕಮ್ಮ ನಾನು ಉಟ್ಟ ಸೀರೆಯನ್ನು ಕೊಡಲಾರೆ ಎಂದಾಗ ನೀಲಯ್ಯ ಬೀಸುಮಚ್ಚು ಹಿಡಿದುಕೊಂಡು ಕಾಡಿಗೆ ಹೋಗುತ್ತಾನೆ. ಅಲ್ಲಿ ಉಗುನಿಯ ಸೊಪ್ಪು ಎಕ್ಕದೆಲೆ, ತೇಗಿನೆಲೆ, ಕಾರುಚಿನಾರು, ನೆಗ್ಗಲುಮುಳ್ಳು, ಕಾರೆಮುಳ್ಳುಗಳನ್ನು ಸಂಗ್ರಹಿಸಿ ಉಟ್ಟಿದ್ದ ಸೀರೆಯನ್ನು ಬಿಚ್ಚಿಸಿ ಉಗನಿ ಸೊಪ್ಪನ್ನು

ಉಡಿಸುವನು, ಎಕ್ಕದ ಎಲೆಯನ್ನು ಎದೆಕಟ್ಟಾಣಿಯೂ, ಕಬ್ಬಾಳೆ ಹಂಬನ್ನು ನಡುಕಟ್ಟಾಗಿಯೂ ತೇಗಿನ ಎಲೆಯನ್ನು ತಲೆ ಮುಸುಕಾಗಿಯೂ ಮಾಡುವನು. ಅವಳ ಕಣ್ಣುಗಳನ್ನು ಸೂಜಿಯಿಂದ ಹೊಲಿಯುತ್ತಾನೆ. ಬಾಯಿಗೆ ಬೀಗ ಹಾಕುವನು ಕಿವಿಗಳನ್ನು ದಬ್ಬಳದಿಂದ ಹೊಲಿಯುವನು; ಮುಂಗೈಗಳನ್ನು, ಹಿಂಗಾಲುಗಳನ್ನು ಕಟ್ಟುವನು, ಕಟ್ಟು ಕಟ್ಟಿಗೆಲ್ಲಾ ಬೆಲ್ಲದ ನೀರನ್ನು ಎರಚಿ ಕಟ್ಟೆರಗಳನ್ನು ಮೈಮೇಲೆ ಬಿಡುತ್ತಾನೆ. ಅವಳನ್ನು ಮುಖ ಅಡಿಮಾಡಿ ಮಲಗಿಸಿ ನೆಗ್ಗಲು ಮುಳ್ಳನ್ನು ಹಾಸುವನು. ಬೆನ್ನಿನ ಮೇಲೆ ಗುಂಡೊಂದನ್ನು ತಂದು ಇಡುವನು. ಇಷ್ಟಕ್ಕೂ ತೃಪ್ತಿಯಾಗದೆ ಗುಡಿಸಿಲಿನ ಮುಂದೆ ಮರಳನ್ನು ಮಂತ್ರಿಸಿ ರಾಹು ಮತ್ತು ಕೇತು ಇವುಗಳನ್ನು ಸೃಷ್ಟಿಸುತ್ತಾನೆ. ನಂತರ ಸೂರ್ಯಮಂಡಲ, ಚಂದ್ರಮಂಡಲ, ಹಿರಿಯಮಂಡಲ, ಗೆಜ್ಜೆಮಂಡಲ ಹೀಗೆ ೭೭ ಮಂಡಲಗಳಿಗೆ ಜೀವ ತುಂಬಿ ಅವೆಲ್ಲವೂ ಬುಸುಗುಟ್ಟುತ್ತಿರುತ್ತವೆ. ಆ ಮಂಡಲಗಳನ್ನು ದಾಟಿ ಹೋದರೆ ಅವಳ ತಲೆ ೧೦೦೦ ಹೋಳಾಗುವಂತೆ ಮಂತ್ರ ಹಾಕುವನು. ಕಗ್ಗಲಿ ಮರದಿಂದ ಗೊಂಬೆಯನ್ನು ತಯಾರಿಸಿ (ರಾಕ್ಷಸಗೊಂಬೆ) ಅದರ ಕೈಯಲ್ಲಿ ಕತ್ತಿಯನ್ನು ಕೊಟ್ಟು ಅವರ ತಲೆಯನ್ನು ಕಡಿದುಹಾಕು ಎಂದು ಅಪ್ಪಣೆಮಾಡಿ ಹೊರಡುತ್ತಾನೆ.

"ಬಂದೂಕವ ತಗದವನೇ
ಹೆಗಲಮೇಲೆ ಮಡಗವನೇ
ಫಿರಂಗಿ ತೋಪಿ ಧರಿಸವನೇ
ಹಾಲುನಾಯನು ಕರದವನೇ
ಜೂಲುನಾಯನು ಕರದವನೇ
ಹೆಜ್ಜೇನು ಗಡಿಗೆ ತಗದವನೇ
ಕಿರಿಜೇನು ಗಡಿಗೆ ತಗದವನೇ
ಬೀಸುಮಚ್ಚನು ತಗದವನೇ
ಬಲದ ಕೈಯಲ್ಲಿ ಹಿಡಿದವನೇ
ಕಿರಿಕೆ ಜೋಡನ್ನು ಮೆಟ್ಟವನೇ
ಕಾಡು ಪೋಡಿಗೆ ಹೊರಟವನಲ್ಲಾ
ಕಾಡು ಸೋಲಿಗರ ನೀಲಯ್ಯ"[೧]

೧. ಮಾದೇಶ್ವರ ಸಮೀಕ್ಷೆ, ಹ.ಜ.ಶಿವಶಂಕರಪ್ಪ, ಪುಟ - ೧೧೭.

ಈ ರೀತಿಯಾಗಿ ಸೋಲಿಗ ನೀಲಯ್ಯ ಬೇಟೆಗೆ ಹೊರಡುತ್ತಾನೆ. ಇದರಿಂದ ತಿಳಿದು ಬರುವ ಸಂಗತಿ ಎಂದರೆ ತನ್ನ ಹೆಂಡತಿಯ ಮೇಲೆ ಗಂಡಸರು ಅನುಮಾನಪಡುವ ರೀತಿ ಇಲ್ಲಿ ಚಿತ್ರಿತವಾಗಿದೆ. ಮತ್ತು ಹೆಣ್ಣಿನ ಶೋಷಣೆಯನ್ನು ಕಾಣಬಹುದಾಗಿದೆ. ಹಾಗೆ ಹೆಣ್ಣು-ಗಂಡಿನ ನಡುವೆ ಇರುವ ತಾರತಮ್ಯವನ್ನು ಗುರುತಿಸಬಹುದಾಗಿದೆ. ಇಂದಿಗೂ ಕೂಡ ಈ ರೀತಿಯ ಹೆಣ್ಣಿನ ಶೋಷಣೆಗಳು ಅನೇಕ ಕುಟುಂಬಗಳಲ್ಲಿ ನಡೆಯುವುದನ್ನು ಕಾಣುತ್ತೇವೆ. ಅಂದರೆ ಸೋಲಿಗರ ಸಂಪ್ರದಾಯದಲ್ಲಿ ಹಲವಾರು ವಿದ್ಯೆಗಳು ಮಾಟಮಂತ್ರ, ಮೋಡಿ ಮುಂತಾದವು ಇವತ್ತಿಗೂ ಸಹ ಪ್ರಚಲಿತದಲ್ಲಿದೆ ಮತ್ತು ಗಂಡ ಹೆಂಡತಿಗೆ ಕೊಡುವ ಚಿತ್ರಹಿಂಸೆಗಳನ್ನು ತಿಳಿಯಲು ಸಾಧ್ಯವಾಗಿದೆ.

**ಬೇವಿನಕಾಳಿಯ ಹಟ್ಟಿಯ ವರ್ಣನೆ**

ಬೇವಿನಹಟ್ಟಿಯ ಯಜಮಾನಿಯಾದ ಬೇವಿನಕಾಳಿಯು ಬೇಡಗಂಪಣ ಜಾತಿಗೆ ಸೇರಿದ ಧನಿಕಳು. ಅವಳು ತನ್ನ ಮನೆಯ ಸುತ್ತಲೂ ಕಲ್ಲಿನ ಕೋಟೆಯನ್ನು ಕಟ್ಟಿಸಿದ್ದಳು. ಭದ್ರವಾದ ಲಾಳಮುಂಡಿಗೆ ಕವಾಟವನ್ನಿಟ್ಟು ಪಶು, ಧನ, ದಾನ್ಯ, ವಸ್ತ್ರ ಭೂಸಂಪನ್ನೆಯಾಗಿದ್ದಳು. ತನ್ನ ಪತಿ, ಏಳು ಮಂದಿ ಪುತ್ರರು ಜಾಮಜಿ ಎಂಬ ಹಿರಿಯ ಸೊಸೆ. ಉಳಿದ ಆರುಮಂದಿ ಸುಂದರವಾದ ಸೊಸೆಯರನ್ನೂ, ಸೇವಕರನ್ನೂ ಅವಳು ಅತ್ಯಂತ ಜಿಪುಣತನದಿಂದ ಜೀವಿಸುತ್ತಿದ್ದಳು. ಕಾಳಮ್ಮ ಹಿಂದೆ ಅತ್ಯಂತ ಬಡತನದಿಂದ ಕೂಡಿದ್ದಳು. ಕಾಳಮ್ಮ ಹುಟ್ಟುವಾಗಲೇ ತಾಯಿಯನ್ನು ಕಳೆದುಕೊಂಡಳು. ಅವಳ ತಂದೆಯ ಪೋಷಣೆಯಲ್ಲಿ ಬೆಳೆದು ೧೬ನೇ ವಯಸ್ಸಿನಲ್ಲಿ ಕಾಳಮ್ಮನಿಗೆ ಮದುವೆಯಾಗುತ್ತದೆ.

ಪತಿಗೆ ಯೋಗ್ಯಳಾಗಿ ಇದ್ದುಕೊಂಡು ೭ ಜನ ಮಕ್ಕಳನ್ನು ಹಡೆದಳು. ಒಂದು ವರ್ಷ ಮಳೆ ಇಲ್ಲದೆ, ಬೆಳೆಯೇ ಇಲ್ಲದಂತಾಗುತ್ತದೆ. ಇದರಿಂದ ಮನೆಮಂದಿಯೆಲ್ಲಾ ಹಸಿದಿರಬೇಕಾಯಿತು. ಕಾಳಮ್ಮನ ತಂದೆ ಬಿದಿರುಕಳಲೆಯನ್ನು ತರಲು ಕಾಡಿಗೆ ಹೋಗಿ ಬರಲಿಲ್ಲ. ಅವನನ್ನು ಹುಡುಕಿಕೊಂಡು ಹೋದ ಕಾಳಮ್ಮನ ಗಂಡನು ಬರಲಿಲ್ಲ. ಗಂಡ ಮತ್ತು ತಂದೆ ಇಬ್ಬರು ಹುಲಿಯ ಬಾಯಿಗೆ ತುತ್ತಾಗಿದ್ದರು. ಮನೆಯಲ್ಲಿದ್ದ ಹಸು ಕರುಗಳೆಲ್ಲವನ್ನು ಮಾರಿ ಮಕ್ಕಳನ್ನು ಸಾಕಿದಳು. ಕಿತ್ತುತಿನ್ನುವ ಬಡತನ, ಕಾಡಲೆಲ್ಲಾ ಹುಡುಕಿದರು ಒಂದು ಮಿಡುಗಾಯಿಯೂ ಕಾಣದಾಗುತ್ತದೆ.

ಕಾಳಮ್ಮನಿಗೆ ಭಿಕ್ಷೆ ಬೇಡುವುದೊಂದೇ ಉಳಿದಿದೆ! "ಏಳುಗಂಡು ಹಾಗೂ ಏಳು ಹೆಣ್ಣು ಮಕ್ಕಳನ್ನು ಭಿಕ್ಷೆಗೆ ಹಾಕುವುದಕ್ಕಿಂತಲೂ ಶಿವ ನಿನ್ನ ಹೆಸರೇಳುತ್ತಾ, ಕಡು ನಿಷ್ಕರುಣಿಯಾದ ನಿನ್ನ ಹೆಸರೇಳುತ್ತಾ ಮಕ್ಕಳಿಗೆ ವಿಷಹಾಕಿ, ನಾನು ವಿಷತಿಂದು

ಸಾಯುವುದರಲ್ಲಿ ಹೆಚ್ಚು ಅರ್ಥವಿದೆ"[೧] ಎಂದು ಅಂದುಕೊಂಡು ಕಾಡನ್ನು ಅಲೆಯುತ್ತಿದ್ದಳು. ಒಂದು ದಿನ ಬಿಸಿಲಿನ ಝಳ ತಾಳಲಾರದೆ ಮುಂದೆ ಹೆಜ್ಜೆ ಇಡಲಾಗದೆ "ಅಯ್ಯೋ ನಿಷ್ಕರುಣಿ ಶಿವ. ನನ್ನ ಹಸಿವು, ಸಂಕಟ ನಿನಗೆ ತಟ್ಟಲಾರದೆ ಎಂದು ನೆಲಕ್ಕೆ ಬೀಳುತ್ತಾಳೆ. ಮಾದೇಶ್ವರ ಅವಳ ಬಡತನವನ್ನು ಹೋಗಲಾಡಿಸಲು ಪ್ರತ್ಯಕ್ಷವಾಗಿ ಸಮಾಧಾನಿಸಿ ಅವಳ ತಂದೆ ಹೂಳಿಟ್ಟಿದ್ದ ಧನವನ್ನು ಕಾಣುವಂತೆ ಮಾಡುತ್ತಾನೆ. ಸಕಲ ಸಂಪತ್ತನ್ನು ಅವಳಿಗೆ ನೀಡುತ್ತಾನೆ. ಕಾಲ ಬಂದಾಗ ನನಗೆ ಬೇಕಾದುದನ್ನು ನಿನ್ನಲ್ಲಿ ಕೇಳಿ ಪಡೆಯುತ್ತೇನೆ ಎಂದು ಮಾದೇಶ್ವರ ಹೊರಡುತ್ತಾನೆ. ನಂತರ ಬೇವಿನಹಟ್ಟಿ ಕಾಳಮ್ಮ ಹೊಸ ಬದುಕನ್ನು ಆರಂಭಿಸಿದಳು. ಮಕ್ಕಳೆಲ್ಲರಿಗೂ ಮದುವೆ ಮಾಡಿ ಸೊಸೆಯಂದಿರನ್ನೂ, ಅಳಿಯಂದಿರನ್ನೂ ತನ್ನಲ್ಲೆ ಇಟ್ಟುಕೊಂಡು ಪ್ರತಿಯೊಂದು ಸಂಸಾರಕ್ಕೂ ಒಂದೊಂದು ಮನೆ ಕಟ್ಟಿಸಿಕೊಟ್ಟಳು. ತನ್ನ ಹಾಗೂ ತನ್ನವರ ಮನೆಗಳ ಸುತ್ತ ಕೋಟೆ ಕಟ್ಟಿಸಿದಳು. ಸಂಪತ್ತು ಹೆಚ್ಚಿದಂತೆ ಅವಳ ದಾಹ ಹೆಚ್ಚಾಯಿತು. ಭಿಕ್ಷುಕರು ಮನೆಯ ಮುಂದೆ ಬರದಂತೆ ಕಾವಲುಗಾರರನ್ನು ನೇಮಿಸಿದಳು. ಗುಬ್ಬಿ, ಕಾಗೆಗಳು, ಕಾಳುಕಡ್ಡಿ ತಿನ್ನದಂತೆ ಮನೆಯ ಚಾವಣಿಗೆ ಬಲೆಯನ್ನು ಹಾಕಿಸಿದ್ದಳು. ಇರುವೆಗಳು ಬರದಂತೆ ಅಗ್ನಿಕೊಂಡವನ್ನು ಏರ್ಪಡಿಸಿದ್ದಳು. ಅಲ್ಲಿಯೇ ಹಾಸಿಗೆಯನ್ನು ಹಾಕಿ ಸೇವಕರನ್ನು ಹಗಲಿರುಳೆನ್ನದೆ ದುಡಿಸಿ ಕಾಡುತ್ತಿದ್ದಳು.

ಇದರಿಂದ ಬೇಸತ್ತ ಜನರು ಈ ಕಷ್ಟದಿಂದ ನೀನು ಪಾರು ಮಾಡೆಂದು ಮಾದೇವನಲ್ಲಿ ಮೊರೆಹೋಗುತ್ತಾರೆ. ಮಾದೇವ ಇವಳ ದರ್ಪವನ್ನು ನಾಶಮಾಡಲು ಗುಡಾರದ ಬಳಿಗೆ ಭಿಕ್ಷುಕನ ರೂಪವನ್ನು ತಾಳಿಬರುತ್ತಾನೆ. ಭಿಕ್ಷೆಬೇಡುವ ಜಂಗಮನಾಗಿ ಬೇವಿನ ಕಾಳಿಯ ಮನೆಗೆ ಬಂದು "ಅಮ್ಮ ನಾನು ಹಸಿದ ಜಂಗಮ, ನನಗೆ ಭಿಕ್ಷೆಕೊಡು ಇಲ್ಲವಾದರೆ ನಿನ್ನ ಗತಿ ನನ್ನಂತೆ ಭಿಕ್ಷೆ ಬೇಡುವಂತಾಗುತ್ತದೆ" ಎಂದು ಹೇಳುತ್ತಾನೆ. ಕಾವಲುಗಾರರ ಕಣ್ಣು ತಪ್ಪಿಸಿ ಬಂದ ಮಾಯಕಾರ ಮಾದೇವನನ್ನು ಬೇವಿನಕಾಳಿ ಬಯ್ದು, ಉಗಿದು, ದೊಣ್ಣೆಯಿಂದ ಹೊಡೆಯುತ್ತಾಳೆ. ಏನೇ ಮಾಡಿದರು ಮಾದೇಶ್ವರ ಕದಲುವುದಿಲ್ಲ. ಜೋಳಿಗೆಯನ್ನು ಹಿಂದಕ್ಕೆ ತೆಗೆಯಲಿಲ್ಲ. ನನಗೆ ಎಣ್ಣೆಮಜ್ಜನಕ್ಕೆ ನಿನ್ನ ಎಳ್ಳು ಅಗತ್ಯವಾಗಿ ಬೇಕು ಎಂದು ಹೇಳುತ್ತಾನೆ. ನೀನು ಎಷ್ಟೇ ಬೇಡಿಕೊಂಡರು ನಾನು ಭಿಕ್ಷೆ ನೀಡುವುದಿಲ್ಲ ಎಂದು ಹೇಳುತ್ತಾಳೆ. ಅವಳ ಗಂಡ ಸಾಯುತ್ತಾನೆ. ಗಂಡು-ಮಕ್ಕಳೆಲ್ಲಾ ಸಾಯುತ್ತಾರೆ. ಮನೆಯಲ್ಲೆ ಹತ್ತಿ ಉರಿಯುತ್ತದೆ. ಎಳ್ಳಿನ ರಾಶಿಯೆಲ್ಲಾ ನಾಶವಾಗುತ್ತದೆ. ಇದನ್ನೆಲ್ಲಾ ನೋಡಿದ ಬೇವಿನ ಕಾಳಿಯು ಎದೆಯೊಡೆದು ಸಾಯುತ್ತಾಳೆ. ಈಗಲೂ ಸಹ ಬೇವಿನಕಾಳಿಯ ಹಟ್ಟಿಯೇ ನಡುಮಲೆಗೆ ಹೋಗಲು

೧. ಮಾದೇಶ್ವರ ಸಮೀಕ್ಷೆ, ಹ.ಜ.ಶಿವಶಅರಪ್ಪ, ಪುಟ - ೧೫೫.

ದಾರಿಯಾಗಿದೆ. ಹೀಗೆ ಅಟ್ಟಹಾಸದಿಂದ ಮೆರೆದ ಬೇವಿನ ಕಾಳಿಯನ್ನು ಮಾದೇಶ್ವರ ನಾಶಮಾಡುತ್ತಾನೆ.

**ಮಂಟೇಸ್ವಾಮಿ ಕಾವ್ಯದಲ್ಲಿ ಕೌಟುಂಬಿಕ ಪರಿಕಲ್ಪನೆ**

ಪ್ರತಿಯೊಂದು ಬುಡಕಟ್ಟು ತನ್ನ ಸಾಂಸ್ಕೃತಿಕ ನೆಲೆಯನ್ನು ಭೌಗೋಳಿಕ ನೆಲೆ-ಯನ್ನು ತನ್ನ ಸಮುದಾಯದಲ್ಲಿರುವ ಸಂಪ್ರದಾಯಗಳು, ನಂಬಿಕೆ, ನಡಾವಳಿಗಳನ್ನು, ಕಲೆಯ ವಿಚಾರಗಳನ್ನು, ನೀತಿ-ನಿಯಮಗಳನ್ನು ಬುಡಕಟ್ಟು ಒಳಗೊಂಡಿರುತ್ತದೆ. ಜನಪದ ಮಹಾಕಾವ್ಯಗಳು ಅಭಿವ್ಯಕ್ತಿಗೊಂಡಿದ್ದು, ಸಾಂಸ್ಕೃತಿಕ ಮಹತ್ವಕ್ಕಾಗಿ ಹುಟ್ಟಿಕೊಂಡ ಈ ಕಾವ್ಯಗಳು ಆಯಾಯ ಬುಡಕಟ್ಟಿನ ಕಾವ್ಯಕೌಶಲಗಳನ್ನು ಸುಪ್ತಪ್ರಜ್ಞೆಯಲ್ಲಿ ಅಡಗಿಸಿ ಮುಗ್ಧ ಕಾವ್ಯಪ್ರಜ್ಞೆಯಾಗಿ ಹೊರಹೊಮ್ಮಿಸಿವೆ. ಬುಡಕಟ್ಟಿನ ಜನರ ನಾಗರಿಕತೆಗೆ ಸಾಕ್ಷಿಯಾಗಿವೆ. ಆಯಾಯ ಬುಡಕಟ್ಟಿನ ಸಾಂಸ್ಕೃತಿಕ ಚೌಕಟ್ಟಿನಲ್ಲಿ ಅದರದೇ ಆದ ಭಾಷೆಯ ಮೂಲಕ ನಿರಂತರ ಬೆಳವಣಿಗೆ ಹೊಂದುತ್ತಲೇ ಬಂದಿವೆ. ಜನಪದ ಕಾವ್ಯಗಳ ಜೀವಂತಿಕೆಯಿಂದ ಕೂಡಿದ್ದು. ಅದು ಮೌಖಿಕವಾಗಿ ಜನರ ಮಧ್ಯೆ ಅವರ ಉಸಿರಿನಂತೆ ಅವಿಭಾಜ್ಯ ಅಂಗವಾಗಿರುವುದಲ್ಲದೆ, ಬುಡಕಟ್ಟಿನ ಜನರ ಬದುಕು ಎಂದಿಗೂ ಕಾವ್ಯದಿಂದ ಬೇರೆಯಾಗಿರುವುದಿಲ್ಲ.[೧]

'ಮಂಟೇಸ್ವಾಮಿಕಾವ್ಯ' ಕರ್ನಾಟಕ ಜನಪದ ಕಾವ್ಯಪ್ರಕಾರಗಳಲ್ಲಿ ಪ್ರಮುಖವಾದ ಹಾಗೂ ವಿಶಿಷ್ಟವಾದ ಜನಪದ ಮಹಾಕಾವ್ಯ. ನೀಲಗಾರರೆಂಬ ವೃತ್ತಿಗಾಯಕರಿಂದ ಅಭಿವ್ಯಕ್ತಗೊಂಡಿದೆ. ಈ ನೀಲಗಾರರಿಗೆ ಮಂಟೆದವರು, ಮಂಟೇಸ್ವಾಮಿಗಳು, ಮಂಟೇದಯ್ಯಗಳು ಎಂದೂ ಕರೆಯುತ್ತಾರೆ. ಈ ಕ್ಷೇತ್ರಗಳು ಮಂಡ್ಯಜಿಲ್ಲೆಯ ಬೊಪ್ಪ-ಗೌಡನಪುರದ ಮಂಟೇಸ್ವಾಮಿಮಠ ಹಾಗೂ ಕಪ್ಪಡಿ, ಚಿಕ್ಕಲ್ಲೂರು, ಮಳವಳ್ಳಿಯಲ್ಲಿ ಇವೆ. ಇವರ ಆರಾಧ್ಯದೈವ ಮಂಟೇಸ್ವಾಮಿ, ಸಿದ್ಧಪ್ಪಾಜಿ ಹಾಗೂ ರಾಚಪ್ಪಾಜಿ. ಇವರು ಬಳಸುವ ವಾದ್ಯ ನಾಲ್ಕು ತಂತಿವುಳ್ಳ ತಂಬೂರಿ ಹಾಗೂ ಗುಮ್ಮಟಿ, ಇವರು ಧರಿಸುವ ಉಡುಪು ಕೆಂಪು ಪೇಟ ಕರಿಯನಿಲುವಂಗಿ ಅಥವಾ ಕರಿಯಕೋಟು, ಬಿಳಿಯ ಪಿಲ್ಲಿ ಪಂಚೆಯ ಕಾಸೆ ಹಾಗೂ ಬಗಲಿಗೊಂದು ಜೋಳಿಗೆ ಈ ಗಾಯಕರು ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ದಟ್ಟವಾಗಿಯೂ ಮತ್ತು ಬೆಂಗಳೂರು ಜಿಲ್ಲೆಯಲ್ಲಿ ವಿರಳ-ವಾಗಿದ್ದಾರೆ. ಮಂಟೇಸ್ವಾಮಿ ಕಾವ್ಯದ ನೀಲಗಾರರು ಹಾಗೂ ಮಾದೇಶ್ವರ ಕಾವ್ಯ ಮಾಡುವ ಕಂಸಾಳೆಯವರು ಒಂದೇ ಭೌಗೋಳಿಕ ಪರಿಸರದಲ್ಲಿ ಕಂಡುಬರುತ್ತವೆ.

---

೧. ಮಂಟೇಸ್ವಾಮಿ ಕಾವ್ಯ (ಲೇಖನ) ಡಾ. ಚಂದ್ರುಕಾಳೇನಹಳ್ಳಿ, ಪುಟ - ೪೯, ಕರ್ನಾಟಕ ಜನಪದ ಮಹಾಕಾವ್ಯಗಳು - ಡಾ. ತೀ.ನಂ.ಶಂಕರನಾರಾಯಣ.

**ಮಂಟೇಸ್ವಾಮಿ ಕಾವ್ಯದ ಕಥಾಸಾರ**

ಮಂಟೇಸ್ವಾಮಿ ಕಾವ್ಯ ಹಾಡುವವರನ್ನು 'ನೀಲಗಾರರು' ಎಂದೂ ಕರೆಯುತ್ತಾರೆ. 'ನೀಲಗಾರ' ಎಂಬ ಶಬ್ದವೇ 'ಲೀಲೆಗಾರ'ದಿಂದ ಬಂದಿರಬಹುದು ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಧರೆಗೆ ದೊಡ್ಡವರು, ಪ್ರಭುಸ್ವಾಮಿ, ಪ್ರಭುದೇವರು, ಪರಂಜ್ಯೋತಿ ಎಂಬ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. 'ಧರೆಗೆ ದೊಡ್ಡವರ' ಲೀಲೆಗಳನ್ನು ಕೀರ್ತಿಸಲೆಂದೇ ಈ ಲೀಲೆಗಾರರು ಕಂಕಣತೊಟ್ಟರು. ಅವರ ಅಭಿಪ್ರಾಯದಲ್ಲಿ ಮಂಟೇಸ್ವಾಮಿ ಬಸವೇಶ್ವರರಿಗೂ ದೊಡ್ಡವರು, ಕಲ್ಯಾಣದಲ್ಲಿ ನೀಲಮ್ಮನನ್ನು ಪರೀಕ್ಷೆ ಮಾಡಲು ಬಂದವರು. ಮಂಟೇಸ್ವಾಮಿಗೆ ಎಷ್ಟು ಗೌರವ ಕೊಡುತ್ತಾರೋ ಅಷ್ಟೇ ಗೌರವವನ್ನು ಅವರ ಶಿಷ್ಯರಾದ ರಾಚಪ್ಪಾಜಿ ಮತ್ತು ಸಿದ್ಧಪ್ಪಾಜಿಯವರಿಗೂ ಗೌರವ ನೀಡಿದ್ದಾರೆ. ಗುರುವಿನ ಪವಾಡಗಳ ಜೊತೆ, ಶಿಷ್ಯರ ಪವಾಡಗಳನ್ನು ಚಿತ್ರಿಸಿದ್ದಾರೆ. ಈ ಪರಂಪರೆಯ ಮೂಲ ಪುರುಷ ಸಿದ್ದಪ್ಪಾಜಿ ಎಂದು ವರ್ಣಿಸಲಾಗಿದೆ. ಮಂಟೇಸ್ವಾಮಿ ಕಾವ್ಯದ ಉದ್ದಕ್ಕೂ ಸಿದ್ದಪ್ಪಾಜಿಯ ಮಹಿಮೆಯ ಕೀರ್ತನೆ ಇದೆ. ಸಿದ್ದಪ್ಪಾಜಿಯನ್ನು 'ಘನನೀಲಿ ಸಿದ್ಧಯ್ಯ' ಎಂದು ಕರೆಯಲಾಗಿದೆ. 'ಘನನೀಲಿ' ಎಂದರೆ 'ಘನಲೀಲೆ' ಎಂದರ್ಥವಾಗುತ್ತದೆ.

ಮಂಟೇಸ್ವಾಮಿ ಕಾವ್ಯ ಕಲ್ಯಾಣದಿಂದ ಪ್ರಾರಂಭವಾಗುತ್ತದೆ. ಮಂಟೇಸ್ವಾಮಿ ಕಲ್ಯಾಣ ಪಟ್ಟಣ ಪ್ರವೇಶ ಮಾಡುವ ರೀತಿಯೇ ರೋಮಾಂಚನವಾಗಿದೆ. ಅಸಹ್ಯ ಹುಟ್ಟಿಸುವ ರೋಗಿಯ ವೇಷದಲ್ಲಿ ಪ್ರವೇಶಿಸಿ ಎಲ್ಲರನ್ನು ಆಶ್ಚರ್ಯ ಚಕಿತ-ರನ್ನಾಗಿಸುತ್ತಾರೆ. ಪ್ರಚಂಡ ಜಂಗಮರ ಲಿಂಗಗಳನ್ನು ನಾಶಮಾಡುವ ಕಾರ್ಯದಲ್ಲಿ ತೊಡಗುತ್ತಾರೆ. ಅತ್ಯಂತ ಭಕ್ತಿವಂತ ಶರಣರು ಮಂಟೇಸ್ವಾಮಿಯ ಪರೀಕ್ಷೆಯನ್ನು ಎದುರಿಸಿ ಉಳಿಯುತ್ತಾರೆ. ಹೊಲೆಯರ ಹೊನ್ನಪ್ಪ, ಮಾದಿಗರ ಚೆನ್ನಯ್ಯ, ಮಡಿವಾಳ ಮಾಚಪ್ಪ, ಗಾಣಿಗರ ದಾಸಪ್ಪ, ಅಂಬಿಗರ ಚೌಡಯ್ಯ ಮುಂತಾದ ಶಿವಭಕ್ತರು ಶುದ್ಧ ಶರಣರಾಗುತ್ತಾರೆ.

ರಾಚಪ್ಪಾಜಿ, ತೋಪಿನದೊಡ್ಡಮ್ಮ, ಚೆನ್ನಾಜಮ್ಮ, ಮಡಿವಾಳ ಮಾಚಯ್ಯ, ಸಿದ್ಧಪ್ಪಾಜಿ ಇವರೆಲ್ಲಾ ಮಂಟೇಸ್ವಾಮಿಯ ಅನುಯಾಯಿಗಳಾಗಿ, ಶಿಶುಮಕ್ಕಳಾಗಿ ಪಡೆಯುವುದೇ ಒಂದೊಂದು ಕಥಾನಕವಾಗಿ ರೂಪುಗೊಂಡಿದೆ. ಮೋಡಿ, ಮಾಟ, ತಂತ್ರ, ಮಾಯಕಾರ ವಿದ್ಯೆಗಳು ಇಲ್ಲಿ ಕಂಡುಬರುತ್ತವೆ. ಮಂಟೇಸ್ವಾಮಿ ಅಹಂಕಾರಿ-ಗಳನ್ನು ಮಟ್ಟಹಾಕಲು ಬಂದ ಒಬ್ಬ ಆಧ್ಯಾತ್ಮಿಕ ನೇತಾರನಾಗಿ ಕಾಣಿಸಿಕೊಳ್ಳುತ್ತಾನೆ. ಅವನಿಗೆ ಸಾಧ್ಯವಾಗದಿದ್ದಲ್ಲಿ ಮೌನಿಯಾಗಿ ಕುಂತೂರು ಬೆಟ್ಟ ಹತ್ತಿ ಭಂಗಿಯ ಸೇವನೆ

ಮಾಡುತ್ತಾನೆ. ಅವನ ಭಂಗಿಯನ್ನು ಖಂಡುಗಗಟ್ಟಲೆ ಸೇವಿಸಿ ವಾಲುತ್ತಾ, ಜೋಲುತ್ತಾ ಅವನು ಪರಿಹಾರ ಕಂಡುಕೊಳ್ಳುತ್ತಾನೆ.

ಮಂಟೇಸ್ವಾಮಿ ಮತ್ತು ಅವರ ಶಿಷ್ಯರು ಸಾಗಿ ಬಂದ ಪ್ರದೇಶಗಳು ಇಂದಿಗೂ ಇವೆ. ಧರಗೆ ದೊಡ್ಡವರು ದಕ್ಷಿಣದ ಕಡೆ ಹೊರಟು ಮೊದಲು ಬಂದುದು ಹೊನ್ನಾಯ್ಕನ ಹಳ್ಳಿಗೆ, ಅನಂತರ ಮಳವಳ್ಳಿಗೆ ಬಂದರು. ಅನಂತರ ಕಾಡಂಕನ ಹಳ್ಳಿಗೆ ಬಂದರು. ಮಡಿವಾಳನ ಒಲೆಯಲ್ಲಿ ಅಮೃತಮಣ್ಣನ್ನು ನೋಡಿ ಮನಸೋತು ಅದಕ್ಕೆ ಒಪ್ಪಿಕೊಂಡ ಪುರ ಎಂದು ನಾಮಕರಣವಾಯಿತು. ಅದೇ ಬೊಪ್ಪೇಗೌಡನ ಪುರವಾಗಿದೆ. ಮಂಟೇಸ್ವಾಮಿ ಕಾವ್ಯದಲ್ಲಿ ಅವರ ಶಿಷ್ಯರು ಮಾಡಿದ ಜನಪರ ನಿಲುವುಗಳನ್ನು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಇಂದಿಗೂ ಸ್ತುತಿ ಮಾಡುತ್ತಾರೆ. ಸಿದ್ಧಪ್ಪಾಜಿಯನ್ನು 'ಮಾರೀರ ಮಸಣೀರ ಗಂಡ' ಎಂದೂ ದುರ್ಗಿ ಚೌಡೀರ ಮಿಂಡ' ಎಂದು ಕರೆಯುತ್ತಾರೆ. ಇದಕ್ಕೆ ಕಾರಣವೇನೆಂದರೆ ಅಂದಿನ ಕಾಲದಲ್ಲಿದ್ದ ಪ್ಲೇಗು, ಕಾಲರಾ ಮುಂತಾದ ಮಾರಕ ರೋಗಗಳನ್ನು ನಿಯಂತ್ರಿಸುವ ಶಕ್ತಿ ಈತನಿಗಿದ್ದುದರಿಂದ ಜನರು ಈ ರೀತಿ ಹೇಳಿರಬಹುದು.

ಮಂಟೇಸ್ವಾಮಿ ಕಥೆಗಳು ಪೌರಾಣಿಕ ಚಾರಿತ್ರಿಕ ಮತ್ತು ಸಾಮಾಜಿಕ ಅಂಶಗಳನ್ನು ಒಳಗೊಂಡಿದೆ. ಮಂಟೇಸ್ವಾಮಿಯು ಕೈಗೊಂಡ ಯಾತ್ರೆಯಲ್ಲಿ ಕರ್ನಾಟಕದ ಹಲವು ಪ್ರದೇಶಗಳು ಕಂಡುಬರುತ್ತವೆ. ವಿಜಯನಗರ, ಕಾಗಿನೆಲೆ, ಸಖರಾಯಪಟ್ಟಣ, ಚನ್ನಪಟ್ಟಣ, ಮಳವಳ್ಳಿ ಕಾಡಂಕನಹಳ್ಳಿ, ಬೊಪ್ಪಗೌಡನಪುರ ಮುಂತಾದವು ಐತಿಹಾಸಿಕ ಘಟನೆಗಳನ್ನು ನೋಡಲು ಇರುವ ಸ್ಥಳಗಳೆಂದರೆ ಮೈಸೂರು, ಎಡತೊರೆ, ಕಾರುಗಹಳ್ಳಿ, ಚಿಕ್ಕಲ್ಲೂರು, ಕಪ್ಪಡಿ ಹಲಗೂರು ಮುಂತಾದುವುಗಳು ಐತಿಹಾಸಿಕ ಆಧಾರಗಳನ್ನು ನೀಡುತ್ತವೆ. ಮಂಟೇಸ್ವಾಮಿ ಕಾವ್ಯದಲ್ಲಿ ಮುಖ್ಯವಾಗಿ ಸಾಂಸ್ಕೃತಿಕ ದೃಷ್ಟಿಯಿಂದ ಕಾಣುವ ಅವಶ್ಯಕತೆ ಇದೆ. ಕೆಲವು ಆಚರಣೆಗಳು, ಸಂಪ್ರದಾಯಗಳು, ನಂಬಿಕೆಗಳು ಜನಪದರ ಮೇಲೆ ಬೀರಿದ ಪ್ರಭಾವಗಳು ಕಂಡುಬಂದಿವೆ. ಮೈಸೂರು, ಚಾಮರಾಜನಗರ ಜಿಲ್ಲೆಯ ಪ್ರತಿ ಊರಿನಲ್ಲಿ ಮಂಟೇಸ್ವಾಮಿ ಒಕ್ಕಲಿನವರನ್ನೇ ಕಾಣಬಹುದಾಗಿದೆ. ನೀಲಗಾರರು ಕಾವ್ಯವನ್ನು ಹಾಡುವ ಪರಂಪರೆ ಇಂದಿಗೂ ಸಹ ಅಸ್ತಿತ್ವದಲ್ಲಿದೆ.

**ಮಂಟೇಸ್ವಾಮಿ ಕಾವ್ಯದಲ್ಲಿ ಕೌಟುಂಬಿಕ ವಿಚಾರಗಳು**

ಮಂಟೇಸ್ವಾಮಿ ಕಾವ್ಯದಲ್ಲಿ ಮುದ್ದಮ್ಮನ ಪ್ರಸಂಗದಲ್ಲಿ ಮಂಟೇಸ್ವಾಮಿಯವರಿಗೆ ಧರೆಗೆ ದೊಡ್ಡವರು, ಪ್ರಭುಸ್ವಾಮಿ, ಅಲ್ಲಮಪ್ರಭುಗಳು, ಪರಂಜ್ಯೋತಿ ಎಂಬ ಹಲವಾರು

ಹೆಸರುಗಳುಂಟು "ಬಳೆ ಮುದ್ದಮ್ಮ ಹಾಲು ಕರೆಯುವಾಗ" ಧರೆಗೆ ದೊಡ್ಡವರು ಮನೆಯ ಬಾಗಿಲಿಗೆ ಭಿಕ್ಷೆಗಾಗಿ ಬಂದಾಗ ಇವರನ್ನು ಕಂಡ ಹಸು ಬೆದರುತ್ತದೆ. ಹಾಲು ಚೆಲ್ಲುತ್ತದೆ. ಮುದ್ದಮ್ಮ ಬಹಳ ಸಿಟ್ಟಿನಿಂದ "ಹಾಳಾದ ಮಂಟೇದಯ್ಯ' ಎಂದಳು. ಬೀಳು, ಒರಗು ಎಂಬ ಅರ್ಥದಲ್ಲಿ 'ಮಂಟುಕೋ' ಎಂಬ ಶಬ್ದ ಬಳಕೆಯಲ್ಲಿದೆ. ಹಸು ಬೆದರಲು ಕಾರಣವಾದ ಜಂಗಮನಿಗೆ 'ಒರಗಿಹೋಗ' ಎಂಬ ಮಾತನ್ನು ಮುದ್ದಮ್ಮ ಆಡಿದಳು. ಅದೇ ಅವರ ನಾಮಕರಣವಾಯಿತು. ಧರೆಗೆದೊಡ್ಡವರು ಆ ಹೆಸರನ್ನೇ ಇಟ್ಟುಕೊಂಡರು. ಇದು ಕೂಡ ಜಾನಪದ ವಿಚಾರದಲ್ಲಿ ಇಂದಿಗೂ ಸಹ ಕೆಲವರ ಹೆಸರು ಮಂಟೇಲಿಂಗಯ್ಯ, ಮಂಟೇಸ್ವಾಮಿ, ಸಿದ್ಧಪ್ಪಾಜಿ ಈ ರೀತಿಯ ಹೆಸರುಗಳನ್ನು ಇಟ್ಟುಕೊಂಡಿರುವುದು ವಾಡಿಕೆಯಲ್ಲಿದೆ. ಇದು ಜನಪದ ಕೌಟುಂಬಿಕ ವ್ಯವಸ್ಥೆಯಲ್ಲಿ ಕಂಡುಬರುವ ವಿಚಾರವಾಗಿದೆ.

ಕಬ್ಬಿಣದ ಕೆಲಸಮಾಡುವ ವಿಶ್ವಕರ್ಮ ಜಾತಿಯಲ್ಲಿ ಇಂದಿಗೂ ಸಹ ಈ ಮಂಟೇಸ್ವಾಮಿಯ ಸ್ಮರಣೆಗಾಗಿ ತಮ್ಮ ವಂಶದಲ್ಲಿ ಒಬ್ಬರಿಗಾದರೂ ಈ ಮಂಟೇಸ್ವಾಮಿಯ ಹೆಸರನ್ನು ನಾಮಕರಣ ಮಾಡಿರುವುದು ವಾಸ್ತವದ ಸಂಗತಿ–ಯಾಗಿದೆ. ಪ್ರತಿಯೊಂದು ಕುಟುಂಬದಲ್ಲೂ ಇಂತಹ ಹೆಸರುಗಳು ರೂಢಿಯಲ್ಲಿದೆ.

**ರಾಚಪ್ಪಾಜಿಯ ಮನೆತನ**

ರಾಚಪ್ಪಾಜಿ ಚನ್ನಪಟ್ಟಣದ ಕೂರ್ಮಗೆರೆಯಲ್ಲಿ ರಾಜಪುತ್ರ ಮನೆತನಕ್ಕೆ ಸೇರಿದ ವ್ಯಕ್ತಿ. ರಾಚಪ್ಪಾಜಿ ಆಡು ಕುರಿ ಕಾಯ್ಕೊಂಡು ಒಂದು ಮಠವನ್ನು ಮಾಡಿಕೊಂಡು ಇರುತ್ತಾರೆ. ಆ ಮಠಕ್ಕೆ ಧರೆಗೆ ದೊಡ್ಡವರು ಬಂದು ಅವರಿಗೆ ಚೆನ್ನಸಂಗಯ್ಯ ಎಂದು ನಾಮಕರಣಮಾಡುತ್ತಾರೆ. ಅಲ್ಲಿಯೇ ಆದಿ ಹೊನ್ನಾಯ್ಕನ ಹಳ್ಳಿಯ ಬಳೆ ಮುದ್ದಮ್ಮ ಹಾಲುಕರೆಯುವಾಗ 'ಧರೆಗೆ ದೊಡ್ಡವರ' ಜಾಗಟೆಯ ಶಬ್ದಕ್ಕೆ ಹಸು ಬೆದರಿದಾಗ "ಹಾಳಾದ ಮಂಟೇದ ಒಡೆಯರೇ ಮುಂದೆ ಹೋಗಿ" ಎನ್ನುವುದರಿಂದ ಮಂಟೇಸ್ವಾಮಿ ಎಂಬ ನಾಮಕರಣ ಮಾಡಿಕೊಂಡು ಮಳವಳ್ಳಿಯಲ್ಲಿ ಆಲದ ಮರದ ನೆರಳಿನಲ್ಲಿ ಮಲಗಿರುತ್ತಾರೆ. ಅವರಿಗೆ ನಿಮಗೆ ಮಠವಿಲ್ಲವೇ? ಎಂದಾಗ ಸಿಟ್ಟಿನಿಂದ ಧರೆಗೆ ದೊಡ್ಡವರು ತುಸು ಮಾತಾಡಬೇಡ ನಾವು ಪಾದ ಊರಿದ ಜಾಗಟೇ ನಮಗೆ "ಮಠಮಾಳಿಗೆಕಾಣಿರಯ್ಯ" ಎಂದು ಹೇಳುತ್ತಾರೆ. ಮಳವಳ್ಳಿಯ ವರ್ಣನೆಯನ್ನು ಈ ಪದ್ಯ ತಿಳಿಸುತ್ತದೆ.

"ಮಳವಳ್ಳಿ ಅಡವಿ ಒಳಗೆ
ಏಳುದಿವಸ ಇದ್ದರಂತೆ

ಅಲ್ಲೇ ಕೋಟೆಕೊತ್ತಲ ಎದ್ದಿರಂತೆ
ಪೇಟೆ ಮನೆಗಳು ಕಟ್ಟಿದವಂತೆ"[೧]

ಅಲ್ಲಿಯೂ ಅವರು ನೆಲಸದೆ ಕುಂತೂರು ಮಠಕ್ಕೆ ಬರುತ್ತಾರೆ. ಅಲ್ಲಿಂದ ಕೊಡೆಕಲ್ಲಿಗೆ ಬರುತ್ತಾರೆ. ಮೇಲೆ ಸುಡು ಸುಡು ಬಿಸಿಲು ಅ ಕಲ್ಲೇ ಕೊಡೆಯಾಗಿ ಬಾಗಿ ನೆರಳು ನೀಡುತ್ತದೆ. ಹುಲಿಯ ಚರ್ಮವನ್ನು ಹೊದ್ದು ಮಲಗುತ್ತಾರೆ. ಫಲಾಹಾರದಯ್ಯ, ಚೆನ್ನಾಜಮ್ಮ, ರಾಚಪ್ಪಾಜಿ ಎಲ್ಲರೂ ಅವರ ಪಾದದಡಿಯಲ್ಲಿ ಮಲಗುತ್ತಾರೆ. ರಾಚಪ್ಪಾಜಿ ವಿಜಯನಗರದ ಗಾರುಡಿಗರ ಮಕ್ಕಳು 'ಇರಳೆಕೋಲು' ಆಟವಾಡುತ್ತಿರುವಾಗ ಅವರ ಜೊತೆ ರಾಚಪ್ಪಾಜಿಯು ಸಹ ಆಟಕ್ಕೆ ಸೇರಿ ಇರಳೆಕೋಲನ್ನೆಲ್ಲಾ ಗೆಲ್ಲುತ್ತಾರೆ. ಅವರು 'ಘನಮೋಡಿ' ಆಟಕ್ಕೆ ಕರೆದಾಗ ಅವರನ್ನೆಲ್ಲಾ ಮೂರ್ಚೆ ಮಾಡಿ ಸೋಲಿಸುತ್ತಾನೆ. ಆವಾಗ ಅವರೆಲ್ಲಾ ಬಂದು ಧರೆಗೆ ದೊಡ್ಡವರ ಪಾದಗಳನ್ನು ಹಿಡಿದಾಗ ಎಲ್ಲರಿಗೂ ಮತ್ತೆ ಜೀವ ಬರುವಂತೆ ಮಾಡುತ್ತಾನೆ. ಅವರೆಲ್ಲಾ ಮಂಟೇಸ್ವಾಮಿಯ ಒಕ್ಕಲಾಗುತ್ತಾರೆ. ಹುಚ್ಚು ಆವೇಶದಿಂದ ರಾಚಪ್ಪಾಜಿ ಗುರುವಿನ ಶಕ್ತಿಯಿಂದ ಕುಣಿಯುತ್ತಾ ಮೋಡಿಕಾರರನ್ನೇ ಮೋಡಿಮಾಡಿ ಅವರನ್ನು ಗೆಲ್ಲುತ್ತಾನೆ. ಇದು ಕೂಡ ಜಾನಪದ ಕಾವ್ಯಗಳಲ್ಲಿ ಮೋಡಿ, ಮಂತ್ರ, ತಂತ್ರ, ಮಾಯಾಮಾಟ ಇವೆಲ್ಲವನ್ನು ನಾವು ಕಾಣಬಹುದಾಗಿದೆ. ಇದರಿಂದ ಮಂಟೇಸ್ವಾಮಿಯ ಭಕ್ತರಿಗೆ ಭಂಗಿ ಕುಡಿಯುವುದು, ಮಧ್ಯಸೇವನೆ ಮಾಡುವುದು, ಮಾಂಸ ಭಕ್ಷಿಸುವುದು ಇಂದಿಗೂ ರೂಢಿಯಲ್ಲಿದೆ ಮತ್ತು ಮೋಡಿ, ಮಾಟ-ಮಂತ್ರಗಳನ್ನು, ಯಂತ್ರಗಳನ್ನು ಕಟ್ಟುವುದು ಇವತ್ತಿಗೂ ಸಿದ್ಧಪ್ಪಾಜಿ ಗದ್ದುಗೆಗಳಲ್ಲಿ ಪ್ರಚಲಿತವಾಗಿದೆ.

ದೆವ್ವ, ಪಿಶಾಚಿಗಳು, ಹೊಕ್ಕರೆ ಅವರಿಗೆ ದೆವ್ವ ಬಿಡಿಸುವ ಪ್ರಸಂಗವಂತೂ ಭಯಂಕರವಾಗಿದೆ. ಮಂಟೇಸ್ವಾಮಿಯ ದೇವರಗುಡ್ಡರು ಗದ್ದುಗೆಯಲ್ಲಿ ಬೆತ್ತದಿಂದ ಹೊಡೆದು, ಮಂತ್ರಗಳನ್ನು ಹಾಕಿ, ಕಟ್ಟು ಹೊಡೆಯುವುದು ಮುಂತಾದ ಪದ್ಧತಿಗಳು ಇಂದಿಗೂ ಇದೆ.

**ರಾಚಪ್ಪಾಜಿಗೆ ಹೆಣ್ಣು ಕೇಳುವ ಪ್ರಸಂಗ ಮತ್ತು ದೊರೆಯ ಮಕ್ಕಳನ್ನು ಶಿಷ್ಯರಾಗಿ ಪಡೆಯುವುದು**

ವಿಜಯನಗರದ ಮುಂದೆ ಹೋಗುತ್ತಾ ಮಂಟೇಸ್ವಾಮಿಗಳು ಕಾಗಿನೆಲೆಗೆ ಬರುತ್ತಾರೆ. ರಾಚಪ್ಪಾಜಿಗೆ ಕಲ್ಯಾಣ ಮಾಡಲು ಯೋಚನೆ ಮಾಡುತ್ತಾರೆ.

---

೧. ಮಂಟೇಸ್ವಾಮಿ ಕಾವ್ಯ - ಹಿ.ಶಿ.ಬೋರಲಿಂಗಯ್ಯ, ಪುಟ - ೧೯.

ಕಾಗಿನೆಲೆಯಲ್ಲಿ ವಾಸವಾಗಿದ್ದ ಅರಸು ಮನೆತನದವರಾದ ಬಸವಲಿಂಗಯ್ಯ ಮತ್ತು ಕಲ್ಯಾಣಮ್ಮ ದಂಪತಿಗಳ ಒಬ್ಬಳೇ ಮಗಳನ್ನು ಮಂಟೇಸ್ವಾಮಿ ಭಿಕ್ಷೆ ಕೇಳುತ್ತಾರೆ.

ಆ ಸಂದರ್ಭದಲ್ಲಿ ಬಸವಲಿಂಗಯ್ಯ 'ಕತ್ತಿನಮೇಲೆ ಗುದ್ದಿ ಆಚೆ ತಳ್ಳಿಸುತ್ತಾನೆ' ಈ ರೀತಿ ಮಾಡಿದಾಗ ಅವಳ ಮಗಳಿಗೆ ಯಮದಜ್ವರ ಬರುತ್ತದೆ. ಆ ಜ್ವರದಿಂದ ಆ ಮಗಳು ಸಾಯುತ್ತಾಳೆ. ಮಗಳನ್ನು ಸಂಸ್ಕಾರಮಾಡಿ ಮನೆಗೆ ಬಂದ ಮೇಲೆ, ಆ ಸಮಾಧಿಯಿಂದಲೇ ಸತ್ತ ಮಗುವನ್ನು ಬದುಕಿಸಿ ಮತ್ತೆ ಬಸವಲಿಂಗಯ್ಯನ ಮನೆಯ ಬಾಗಿಲಿಗೆ ಕರೆದುತರುತ್ತಾರೆ. ಈ ಮಗ ನಮ್ಮದು' ಎಂದಾಗ ನಿಮ್ಮ ಮಗಳಾದರೆ ಕೊಳ್ಳಿ ಎಂದಾಗ ಆ ಮಗಳು ತಂದೆತಾಯಿಯ ಹತ್ತಿರ ಹೋಗುವುದಿಲ್ಲ. ದುಃಖ ಮಾಡಬೇಡಿ ಈ ಹೆಣ್ಣುಮಗಳನ್ನು ನಾವು ದೇವರು ಮಾಡಿ ನಿಲ್ಲಿಸುತ್ತೇವೆ ಎಂದು ಆ ಮಗುವನ್ನು ಕರೆದುಕೊಂಡು ಹೋಗುತ್ತಾರೆ.

ನಂತರ ಸಖರಾಯ ಪಟ್ಟಣದಲ್ಲಿ ಇಬ್ಬರು ದೊರೆಗಳು ಇರುತ್ತಾರೆ. ಆ ಇಬ್ಬರೂ ದೊರೆಗಳಿಗೂ ಒಬ್ಬೊಬ್ಬ ಗಂಡುಮಕ್ಕಳು ಇರುತ್ತಾರೆ. ಆ ಮಕ್ಕಳನ್ನು ಭಿಕ್ಷೆ ಬೇಡುತ್ತಾರೆ. ದೊರೆಗಳು ಮಂಟೇದಸ್ವಾಮಿಗಳಿಗೆ ವಿಷದ ಕಜ್ಜಾಯವನ್ನು ನೀಡುತ್ತಾರೆ. ಆ ವಿಷಯದ ಕಜ್ಜಾಯಗಳನ್ನು ಗುಂಬಳಾಪುರದ ಹೊಳೆಗೆ ಹೋಗಿ ತಮ್ಮ ಶಿಷ್ಯರಿಗೂ ನೀಡಿ ತಾವು ತಿನ್ನುತ್ತಾರೆ. ಅದೇ ಮಾರ್ಗದಲ್ಲಿ ಬಂದಂತಹ ರಾಜರ ಮಕ್ಕಳಿಗೂ ನೀಡುತ್ತಾರೆ. ಅದನ್ನು ತಿನ್ನುತ್ತಾ ಅರಮನೆ ಬಾಗಿಲಿಗೆ ಬಂದ ಮಕ್ಕಳು ಕುಸಿದುಬೀಳುತ್ತಾರೆ. ಆ ವೇಳೆಗೆ ಧರೆಗೆ ದೊಡ್ಡವರು ಅರಮನೆ ಮುಂದೆ ಕಾಣಿಸಿಕೊಂಡು ಅದರ ತಪ್ಪನ್ನು ತಿಳಿಸುತ್ತಾರೆ. ಇದರಿಂದ ಬೇಸತ್ತು, ನೊಂದು ದೊರೆ 'ನಮ್ಮ ಮಕ್ಕಳನ್ನೂ ಪಡೆದು ಕೊಡಿ' ಎಂದಾಗ ಈ ಮಕ್ಕಳ ಪ್ರಾಣವನ್ನು ಉಳಿಸಿದರೆ ನಮ್ಮ ಶಿಷ್ಯರನ್ನಾಗಿ ಮಾಡಬೇಕು ಎಂದಾಗ ಒಪ್ಪಿಕೊಳ್ಳುತ್ತಾರೆ.

ಆವಾಗ ಮಂಟೇಸ್ವಾಮಿ ಆ ಮಕ್ಕಳನ್ನು ಬದುಕಿಸುತ್ತಾರೆ. ಹಿರಿಯ ದೊರೆಯ ಮಗನನ್ನು ಬಸವರಾಜೇಂದ್ರ ಸ್ವಾಮಿಗಳಾಗಿ, ಚಿಕ್ಕದೊರೆಯ ಮಗ ಕಿರಿಯ ಗುರು ರಾಜಪಟ್ಟದ ವೀರಭದ್ರಸ್ವಾಮಿಗಳು ಎಂದು ನಾಮಕರಣ ಮಾಡಿ ಅವರನ್ನು ಶರಣ ಮಹಾತ್ಮರ ಜೊತೆ ಚೆನ್ನಪಟ್ಟಣಕ್ಕೆ ಕಳುಹಿಸುತ್ತಾರೆ.

ಹೀಗೆ ಮಂಟೇಸ್ವಾಮಿ ಕಾವ್ಯದಲ್ಲಿ ಭಿಕ್ಷೆಯನ್ನು ಬೇಡುವ ಪ್ರಕ್ರಿಯೆಯಿಂದ ಮತ್ತು ಅಲ್ಲಿರುವ ಅಹಂಕಾರಿಗಳನ್ನು ನಾಶಮಾಡುವ ಉದ್ದೇಶವನ್ನು ಕಾಣುತ್ತೇವೆ. ಅಂದರೆ ದೇವರ ಒಕ್ಕಲನ್ನಾಗಿ ಮಾಡಿಕೊಳ್ಳುವ ನಿಟ್ಟಿನಲ್ಲಿ ಎಲ್ಲರನ್ನು ಮಂಟೇಸ್ವಾಮಿ ಮೋಡಿ, ಮಾಯೆಯಿಂದ ಪಡೆದುಕೊಳ್ಳುವುದನ್ನು ಕಾಣುತ್ತೇವೆ. ಎಲ್ಲಾ ಶಿಷ್ಯಂದಿರು ಕೂಡ ಇವರ ಒಂದು ಮಾಯೆಗೆ ಬಲಿಯಾಗಿ ಬರುವಂತಹ ಪ್ರಸಂಗ ಕಾಣುತ್ತೇವೆ.

**ಕೆಂಪಾಚಾರಿಯ ಮನೆತನ**

ಮಂಟೇಸ್ವಾಮಿ ಕಾವ್ಯದಲ್ಲಿ ಅತ್ಯಂತ ಪ್ರಮುಖ ಭಾಗ ಕೆಂಪಾಚಾರಿಯ ತಂದೆ ತಾಯಿಯು ಯಾರೆಂದರೆ ನಿಡುಗಟ್ಟದ ಮುದ್ದೋಜಿ ಮತ್ತು ಅವನ ಮಡದಿ ಲಿಂಗಮ್ಮ ದಂಪತಿಗಳಿಗೆ ಆರು ಜನ ಗಂಡುಮಕ್ಕಳು, ಕಡೆಯವನೇ ಕೆಂಪಾಚಾರಿ, ಈ ಕೆಂಪಾಚಾರಿಯನ್ನೇ ಮಂಟೇಸ್ವಾಮಿ ಭಿಕ್ಷೆ ಕೇಳುತ್ತಾರೆ. ಆದರೆ ಮುದ್ದೋಜಿ ಕೋಪಗೊಂಡು 'ಕತ್ತಮೇಲೆ ಗುದ್ದಿ ಆಚೆಗೆ ನೂಕಿಸುತ್ತಾರೆ'.

ಕೆಂಪಾಚಾರಿಯು ಕುಲುಮೆ ಕೆಲಸದಲ್ಲಿ ಆಳುಗಳನ್ನು ಕಟ್ಟಿಕೊಂಡು ಇರುತ್ತಾನೆ. ಇನ್ನೂ ಬಾಲಕನಾದ ಕೆಂಪಾಚಾರಿಯನ್ನು ನೋಡಿ ಮಂಟೇಸ್ವಾಮಿ ಭಂಗಿ ಸೊಪ್ಪಿಗೆ ಬೆಂಕಿ ಫಲಾರ ಕೇಳುತ್ತಾರೆ. ಮೂಗಿಕ್ಕಳದಲ್ಲಿ ತಂದ ಕೆಂಡವನ್ನು ಗುರುಗಳ ಅಂಗೈ ಮೇಲೆ ಸುರಿಯುತ್ತಾನೆ. ಅಂಗೈಯಿಂದಲೇ ಭಂಗಿಯನ್ನು ಹಚ್ಚಿಕೊಂಡು ಈಗಲಾದರೂ ನನ್ನ ಶಿಷ್ಯನಾದೀಯ' ಹೋಗಿ ಧರ್ಮಗುರುವೇ ನಿಮ್ಮ ಶಿಷ್ಯ ಆಗೋದಿಲ್ಲ ಎಂದು ತಿರಸ್ಕರಿಸುತ್ತಾನೆ. ಮತ್ತೆ ಪರದೇಶಿ ನಿನ್ನ ಹಿಕ್ಕಳದಲ್ಲಿ ಹಿಡಿದುಕೊಂಡು ರಾವುಗೋಲಲ್ಲಿ ಹೊಡೆಯುತ್ತೀನಿ" ಎಂದು ಗದರಿಸುತ್ತಾನೆ.

ಮುದ್ದೋಜಿಯ ಮನೆಯಲ್ಲಿ ಏಳುದೊಡ್ಡಿ ಕುರಿ, ಏಳುದೊಡ್ಡಿ ದನಗಳು, ಏಳುಮಂದಿ ಜೀತಗಾರರು, ಚಿನ್ನದ ಅರಮನೆ ಹಟ್ಟಿಯ ಕಲ್ಲು ಚಿನ್ನ ಅಪರಂಜಿ-ಯದಾಗಿರುತ್ತದೆ. ಮನೆಗೆ ಅಪರಂಜಿ ಕಳಸವನ್ನು ಹಾಕಿಸಿರುತ್ತಾರೆ. ಅವನು ಅಗರ್ಭ ಶ್ರೀಮಂತನಾಗಿರುತ್ತಾನೆ. ಅಂತಹ ಮುದ್ದೋಜಿಯ ಮನೆಯನ್ನು ಹಾಳು ಮಾಡುತ್ತಾರೆ. ಮಾರ್ಹಳ್ಳಿಯ 'ಕುರುಡುಮಾರಿ' ಕರೆದು ಮುದ್ದೋಜಿಯ ಏಳುದೊಡ್ಡಿ ದನಗಳು, ಕುರಿಗಳು, ಏಳುಮಂದಿ ಜೀತಗಾರರನ್ನು ನಾಶಮಾಡಿಸುತ್ತಾನೆ. ಚಿನ್ನದ ಮನೆ ಮಣ್ಣಿನ ಮನೆಯಾಗುವಂತೆ ನಾಶಮಾಡಿಸುತ್ತಾನೆ. ಅಪರಂಜಿ ಕಳಸ ಮಣ್ಣಿನ ಕಳಸವಾಗುತ್ತದೆ. ಹಟ್ಟಿಕಲ್ಲು ಕಗ್ಗಲಾಗುತ್ತದೆ. ಹೀಗೆ ಅವನ ಮನೆತನವನ್ನು ನಾಶಮಾಡುತ್ತಾನೆ. ಅಣ್ಣತಮ್ಮಂದಿರು ಪ್ರಾಣಬಿಡುತ್ತಾರೆ. ತಂದೆ-ತಾಯಿಗಳು ಪ್ರಾಣಬಿಡುತ್ತಾರೆ. 'ಕೆಂಪಣ್ಣಗೆ ಹುಚ್ಚು ಬೆಪ್ಪಿನ ಗ್ಯಾನ' ಕೊಡುತ್ತಾರೆ.[೧] ಆ ಗ್ಯಾನದಲ್ಲಿ ಕೆಂಪಣ್ಣ "ಈದುಲಿಯೊಂದಿಗೆ ಹೈಲಾಟ ಆಡುವಾಗ ಗುರುವು ಕೈಹಿಡಿದು ಕೇಳ್ತಾರೆ. ಈಗಲಾದರೂ ನನ್ನ ಶಿಷ್ಯ ಆದೀಯ" ಅಂತ ಆಗ ಕೆಂಪಣ್ಣ "ದೊರೆತನ ಏನಾರಾ ಮಾಡ್ತಿರ? ನಿಮ್ಮಂಗೆ ನನ್ನನ್ನೂ ತಿರುಕನ ಮಾಡ್ತೀರ? ಎಂದು ಕಟಕಿಯಾಡುತ್ತಾರೆ. ಮಂಟೇಸ್ವಾಮಿಗಳು ಕೆಂಪಣ್ಣನಿಗೆ "ನೀಲಿಗ್ಯಾನ ಕೊಟ್ಟು ಉರುಸಂಗಿ ಕೊರಡುಕೊಟ್ಟು ಬರಗನ ಮೇಲೆ ಕೂರಿಸುತ್ತಾರೆ. ಅದು ದಿಗಂತದಲ್ಲಿ ಹಾರಿ ಕೆಳಗಿಳಿಸುತ್ತದೆ. ಕಾಳಿಂಗನ ಗವಿಯಲ್ಲಿ ಕೂಡಿ ಹಾಕುತ್ತಾರೆ.

೧. ಮಂಟೇಸ್ವಾಮಿ ಕಾವ್ಯ - ಹಿ.ಶಿ.ಬೋರಲಿಂಗಯ್ಯ

ಹನ್ನೆರಡು ವರ್ಷದ ನಂತರ ಮಂಟೇಸ್ವಾಮಿಗಳು ಮಡಿವಾಳ ಮಾಚಯ್ಯನವರೊಡನೆ ಕೆಂಪಣ್ಣನನ್ನು ಕರೆತರಲು ಕಳುಹಿಸುತ್ತಾರೆ. ಕೆಂಪಣ್ಣ ಕೆಂಪಣ್ಣ... ಕೆಂಪಣ್ಣ ಎಂದು ಕರೆದಾಗ ಮಾತಾಡುವುದಿಲ್ಲ. ಗುರುವಿನ ಅಪ್ಪಣೆಯಂತೆ "ಧರೆಗೆ ದೊಡ್ಡವರ ಮಠದ ಘನ ನೀಲಿ ಸಿದ್ಧಯ್ಯ ಎಂದು ಕರೆದಾಗ ೧೨ ಅಳುದ್ದದ ಹುತ್ತದಿಂದ ಬಂದು ಬಾಗಿಲ ಬಂಡೆ ಒಡೆದು ಗುರುವಿದ್ದ ಬೊಪ್ಪಗೌಡನ ಪುರಕ್ಕೆ ಬರುತ್ತಾರೆ. ಗುರುಪಟ್ಟ ಕಟ್ಟಿಸಿಕೊಂಡ ಸಿದ್ಧಪ್ಪಾಜಿ ಮಾಚಯ್ಯನವರ ಕೈಲಿ ನಡೆಮುಡಿ ಹಿಡಿಸಿಕೊಂಡು, ಮಲ್ಲಿಗೆ ಮಾದೇವಿ ಕೈಲಿ ಪಂಚದೀವಟಿಗೆ ಹಿಡಿಸಿಕೊಂಡು ಎಡಬಾರಿ ಬಲಬಾರಿ ಶರಣರ ಜೊತೆಯಲ್ಲಿ ಬರುತ್ತಾರೆ.

ಹೀಗೆ ಗುರುಶಿಷ್ಯರ ಸಂಘರ್ಷದಲ್ಲಿ ಇಡೀ ಕೆಂಪಾಚಾರಿಯ ಮನೆತನವೇ ನಾಶವಾಗಿ ಅವನಿಗೆ ಹುಚ್ಚು – ಬೆಪ್ಪು ಬಂದಂತಹ ಕಾಲದಲ್ಲಿ ಅವನು ಘನನೀಲಿ ಸಿದ್ಧಪ್ಪಾಜಿಯಾಗಿ ಈ ಧರೆಯಲ್ಲಿ ಮೆರೆದಿರುವುದನ್ನು ಇಲ್ಲಿ ಕಾಣಬಹುದಾಗಿದೆ.

**ಜನಪದ ಜುಂಜಪ್ಪನ ಕಾವ್ಯದಲ್ಲಿ ಕೌಟುಂಬಿಕ ಪರಿಕಲ್ಪನೆ**

ಕರ್ನಾಟಕದ ತುಮಕೂರು, ಚಿತ್ರದುರ್ಗ, ಬೆಂಗಳೂರು, ಬಳ್ಳಾರಿ, ಹಾಸನ ಜಿಲ್ಲೆಗಳಲ್ಲಿ ಆಂಧ್ರಪ್ರದೇಶದ ಮಡಕಶಿರಾ, ಕಲ್ಯಾಣ ದುರ್ಗ ಹಾಗೂ ರಾಯದುರ್ಗ ತಾಲ್ಲೂಕುಗಳಲ್ಲಿ ಎರಡೂ ಲಕ್ಷಕ್ಕೂ ಹೆಚ್ಚಿನ ಸಂಖ್ಯೆಯಲ್ಲಿರುವ ಕಾಡುಗೊಲ್ಲರು ಎಂಬ ಹಿಂದುಳಿದ ಬುಡಕಟ್ಟಿನ ಸಾಂಸ್ಕೃತಿಕ ವೀರ ಹಾಗೂ ಆರಾಧ್ಯದೈವ ಜುಂಜಪ್ಪ.

ಇದಕ್ಕೆ ಹಿನ್ನೆಲೆಯಾಗಿ ಕಾಡುಗೊಲ್ಲರ ಜನ ಜೀವನದಲ್ಲಿ ಗಾಢವಾದ ಪ್ರಭಾವ ಬೀರಿದ್ದಾನೆ ಜುಂಜಪ್ಪ. ಕಾಡುಗೊಲ್ಲರು ಮೂಲತಃ ಗೋಪಾಲಕರಾಗಿದ್ದರು. ಇವರಲ್ಲಿ ೨ ಪಂಗಡಗಳಿವೆ ಅವುಗಳೆಂದರೆ ಕಾಡುಗೊಲ್ಲರು ಮತ್ತು ಊರು ಗೊಲ್ಲರು ಇವರ ಮಾತೃಭಾಷೆ ತೆಲುಗು, ಕಾಡುಗೊಲ್ಲರದು ಕನ್ನಡ ಮಾತೃಭಾಷೆಯಾಗಿದೆ. ಕಾಡುಗೊಲ್ಲರು ಊರುಗಳಿಂದ ದೂರದ ಕಾಡಿನಲ್ಲಿ ಪ್ರತ್ಯೇಕವಾಗಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸಮಾಡುತ್ತಾ ತಮ್ಮ ವಿಶಿಷ್ಟವಾದ ಸಂಸ್ಕೃತಿಯನ್ನು ಉಳಿಸಿಕೊಂಡಿದ್ದಾರೆ.

ಕಾಡುಗೊಲ್ಲರಲ್ಲಿರುವ ಉಪವರ್ಗಗಳನ್ನು 'ಬೆಡಗು'ಗಳೆಂದು ಕರೆಯುತ್ತಾರೆ. ಅವರಲ್ಲಿ ಚಿತ್ತಮುತ್ತಿ ಕುಲದವರು, ಚಂದ ಮುತ್ತಿ ಕುಲದವರು, ರಾಮೇಗೌಡನ ಕುಲದವರು ಎಂಬ ಪ್ರಮುಖವಾದ ೩ ವಿಭಾಗಗಳಿವೆ. ಈ ಒಂದೊಂದು ವಿಭಾಗದಲ್ಲಿಯೂ ಕೆಲವಾರು ಬೆಡಗುಗಳಿವೆ ಚಿತ್ತಮುತ್ತಿ ಕುಲದವರಲ್ಲಿ ಕರಡಿಗೊಲ್ಲರು ಮತ್ತು ಮಾದನವರ ಗೊಲ್ಲರು ಎಂಬ ೨ ಬೆಡಗುಗಳಿವೆ. ಚಂದಮುತ್ತಿ ಕುಲದವರಲ್ಲಿ ಅಜ್ಜೆಯವರು, ನಿನ್ನರು, ಸೋಮನವರು, ಬೊಮ್ಮನವರು ಮೊದಲಾದ ಬೆಡಗುಗಳು ಕಂಡುಬರುತ್ತವೆ. ರಾಮೇಗೌಡನ ಕುಲದವರಲ್ಲಿ ಅರೇನವರು. ಮರೇನವರ.

ಕಂಬಿಯವರ, ಕಹಳೆಯವರು ಇವೆ. ಕರಡಿಗೊಲ್ಲರು, ಮಾರನವರ ಗೊಲ್ಲರು ಜುಂಜಪ್ಪ ದೇವರ ಕೇಂದ್ರಗಳು ಶಿರಾ ತಾಲ್ಲೂಕಿನ ಬೇವಿನಹಳ್ಳಿಯಲ್ಲೂ ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿಯೂ ಇವೆ.

**ಜುಂಜಪ್ಪ ಕಾವ್ಯದ ಕಥಾಸಾರ**

ಕಾಡುಗೊಲ್ಲರ ಜೀವನದಲ್ಲಿ ಅತ್ಯಂತ ಪ್ರಭಾವ ಬೀರಿರುವ ಜುಂಜಪ್ಪನ ಕಾವ್ಯವು ಅತ್ಯಂತ ಕುತೂಹಲಕರವಾದುದು. ೩ ತಲೆಮಾರುಗಳ ಕಥೆಯನ್ನು ಸುದೀರ್ಘವಾಗಿ ಹೊಂದಿರುವ ಕಾವ್ಯವಾಗಿದೆ. ಕನ್ನಡದ ಅತ್ಯುತ್ತಮ ಜನಪದ ಮಹಾಕಾವ್ಯಗಳಲ್ಲಿ ಇದೂ ಒಂದಾಗಿದೆ.

ಈ ಕಥೆಯು ಆರಂಭವಾಗುವುದು ಕೊಂಕಿ ಜರಮಲೆ ಸೀಮೆಯ, ಚಿಕ್ಕ ದ್ಯಾವರ ಹಟ್ಟಿಯಲ್ಲಿ ಬಕ್ಕದಲೆಚಿತ್ತಯ, ಬರಿದಲೆ ಚಿತ್ತಯ್ಯ, ಮಾಪಲ್ಲಿ ಚಿತ್ತಯ್ಯ, ಮೋಪಲ್ಲಿ ಚಿತ್ತಯ್ಯ, ಪೂಜಾರಿ ಚಿತ್ತಯ್ಯ, ಘನಗುಡಿ ಚಿತ್ತಯ್ಯ, ದೇವರ ದಯಾಮಾರ ಎಂಬ ೭ ಜನ ಅಣ್ಣತಮ್ಮಂದಿರಿಗೆ ಬಡಚಿತ್ರಮ್ಮ ಎಂಬುವಳು ಒಬ್ಬಳು ತಂಗಿ ಹುಟ್ಟುತ್ತಾಳೆ. ಇವರಲ್ಲಿ ಕೊನೆಯವನಾದ ದೇವರ ದಯಾಮಾರನನ್ನು ಬಿಟ್ಟು ಉಳಿದವರಿಗೆಲ್ಲಾ ಮದುವೆಯಾಗಿದ್ದರೂ ಯಾರಿಗೂ ಮಕ್ಕಳಾಗಲಿಲ್ಲ. ಚಿಕ್ಕ ಹುಡುಗನಾಗಿದ್ದಾಗಲೇ ಏಳು ಕರುಗಳನ್ನು ಹೊಡೆದು ಕೊಂಡು ಕರಿತೊರೆ ಹಳ್ಳಕ್ಕೆ ಮೇಯಿಸಲು ಹೋಗಿದ್ದ ದೇವರ ದಯಮಾರನನ್ನು ಅಣ್ಣಂದಿರು ಕರೆದುಕೊಂಡು ಬಂದು ಅವನಿಗೆ ಕಂಬಕ್ಕ ಎಂಬ ಹೆಣ್ಣುಮಗಳನ್ನು ತಂದು ಮದುವೆ ಮಾಡುತ್ತಾರೆ.[೧]

ಮದುವೆಯಾದ ದಯಮಾರನಿಗೆ ಹೆಂಡತಿಗಿಂತ ದನಗಳ ಮೇಲಿನ ಪ್ರೀತಿ ಹೆಚ್ಚಾಗಿ ಅವನು ಕಾಡಿನಲ್ಲಿ ದನಗಳ ಜೊತೆ ಉಳಿದುಬಿಡುತ್ತಾನೆ. ಈ ನಡುವೆ ಓರೆಗಿತ್ತಿಯರ ಕಿರುಕೊಳವನ್ನು ತಾಳಲಾರದೆ ಕಂಬಕ್ಕ ಬಹಳ ಕಷ್ಟದಿಂದ ದೇವರ ದಯಮಾರನನ್ನು ಸೇರಿಕೊಳ್ಳುತ್ತಾಳೆ. ಹುಟ್ಟಿದ ಮಗುವನ್ನು ಬಿಟ್ಟು ತಂದೆ-ತಾಯಿಗಳು ತೀರಿಕೊಂಡಾಗ, ಆ ಮಗುವನ್ನು ಶಿವಪಾರ್ವತಿಯರು ಕಾಪಾಡುತ್ತಾರೆ. ಅನಂತರ ಆ ಮಗು ಬಡಚಿತ್ತಮ್ಮನ ರಕ್ಷಣೆಯಲ್ಲಿ ಬೆಳೆಯುತ್ತದೆ. ಮಗುವಿಗೆ ಕೆಂಗುರಿ ಮಲ್ಲಪ್ಪ ಎಂಬ ಹೆಸರನ್ನಿಟ್ಟರು. ಕಾಲಕ್ರಮೇಣ ಕೆಂಗುರಿ ಮಲ್ಲಪ್ಪನ ದೊಡ್ಡಮ್ಮಂದಿರಿಗೂ ಮಕ್ಕಳಾಗುತ್ತವೆ. ಅವರು ಅಸೂಯೆಯಿಂದ ಕೆಂಗುರಿ ಮಲ್ಲಪ್ಪನಿಗೆ ತೊಂದರೆಕೊಡುತ್ತಿದ್ದರು. ಇವರ ಕಾಟವನ್ನು ತಾಳಲಾರದೆ ಒಕ್ಕಲಿಗನಾದ ಹೊನ್ನಹಟ್ಟಿ ಅಲೇಗೌಡನ ಬಳಿ ಸೇರಿ ಅಭಿವೃದ್ಧಿಯನ್ನು ಹೊಂದುತ್ತಾನೆ. ಇದರಿಂದ ಕೆಂಗುರಿ ಮಲ್ಲಪ್ಪನಿಗೆ ಅಲೇಗೌಡನ

೧. ಜಾನಪದ ಸಮೀಕ್ಷೆ - ವಿಶ್ಲೇಷಣೆ - ಡಾ. ತೀ.ನಂ.ಶಂಕರನಾರಾಯಣ, ಪುಟ - ೨೭೯.

ಹೆಂಡತಿ ಹಿಂಸೆ ನೀಡುತ್ತಿದ್ದಳು. ಅವನ ಪವಾಡಶಕ್ತಿಗೆ ಹೆದರಿ ಶರಣಾಗತಳಾದಳು. ಕೆಂಗುರಿ ಮಲ್ಲೇಗೌಡನಿಗೆ ಕಂಬಿಯರ ಗೊಲ್ಲರ ಬೆಡಗಿಗೆ ಸೇರಿದ ಸಿನ್ನಮ್ಮ ಎಂಬಾಕೆಯನ್ನು ವಿವಾಹ ಮಾಡಿದರು. ಅಲೇಗೌಡ ಸ್ವತಃ ನಿಂತ ಸಿನ್ನಮ್ಮನ ಅಣ್ಣಂದಿರಾದ ಎರಿಜಿನ್ನ, ಮರಿಜಿನ್ನ, ಕೀವಟ್ಟಿ ಮರಿಪಿಡ್ಡ, ಕಡೇಹುಟ್ಟಿನ ಕಟ್ಟಾಣಿ, ಬೇವಿನ ಎಲೆ ಚಿನ್ನ, ದೊಡ್ಡ ಚಿನ್ನೇಗೌಡ, ಚಿಕ್ಕ ಚಿನ್ನೇಗೌಡ ಅವರೊಡನೆ ಮಾತುಕತೆ ನಡೆಸಿ ಕೆಂಗುರಿ ಮಲ್ಲಪ್ಪನ ಮದುವೆಯನ್ನು ಸ್ವತಃ ನಿಂತು ಮಾಡಿಸಿದ ಕೆಂಗುರಿ ಮಲ್ಲಪ್ಪ ತನ್ನ ತಂದೆಯಂತೆ ಹೆಂಡತಿಯನ್ನು ಬಿಟ್ಟು ದನಗಳನ್ನು ಕಾಯುತ್ತಾ ಕಾಡಿನಲ್ಲಿಯೇ ೧೨ವರ್ಷ ಕಳೆಯುತ್ತಾನೆ. ಈ ನಡುವೆ ಕಂಬಿಯರ ಸಿನ್ನಮ್ಮ, ಅಪ್ಪನಗುಡ್ಡೆ ರೊಪ್ಪದ ಏಣಿನ, ಹಾಲಹರತಿ ಬಯಲಿನ ಹಂಚಿಹುಲ್ಲಿನ ಅರಮನೆಯಲ್ಲಿದ್ದಳು.

ಇವಳು ಈ ರೀತಿಯಾಗಿ ವಾಸಮಾಡುವಾಗ ಸುತ್ತಮುತ್ತ ಹೆಂಗಸರು ಬಂಜೆ ಎಂದು ಹೀಯಾಳಿಸುತ್ತಿದ್ದರು. ತನ್ನ ವಂಶದ ಗೌರಸಂಸ್ರದ ಮಾರಮ್ಮನನ್ನು ನೆನೆದಾಗ ಅವಳು ಈಶ್ವರನನ್ನು ಬೇಡಿದಳು. ಈಶ್ವರ ತನ್ನ ಮಗ ವೀರಭದ್ರ ಕೈಲಾಸದಲ್ಲಿ ವಿಪರೀತ ಪುಂಡನಾಗಿ ತೊಂದರೆ ಕೊಡುತ್ತಿದ್ದುದನ್ನು ಗಮನಿಸಿ ಭೂಲೋಕದಲ್ಲಿ ಸಿನ್ನಮ್ಮನ ನಡುಬೆನ್ನಿನಲ್ಲಿ ಹುಟ್ಟು ಎಂದು ಕಳುಹಿಸುತ್ತಾನೆ. ಅವನೇ ಜುಂಜಪ್ಪನಾಗಿ ೧೬ ವರ್ಷಗಳ ಕಾಲ ಭೂಮಿಯಲ್ಲಿ ಮಹಾಮಹಿಮನಾಗುತ್ತಾನೆ. ಕಾಡುಗೊಲ್ಲರ ಆರಾಧ್ಯದೈವವಾಗುವಂತೆ ಹೇಳಿಕಳುಹಿಸುತ್ತಾನೆ.

ಹೀಗಾಗಿ ಕಂಬಿಯರ ಚೆನ್ನಮ್ಮ ಈಶ್ವರನ ವರದಂತೆ ಕೆಂಗುರಿ ಮಲ್ಲಪ್ಪನ ಜೊತೆಗೂಡಿ ಗರ್ಭಿಣಿಯಾಗುತ್ತಾಳೆ. ನವಮಾಸ ತುಂಬಿ ಜುಂಜಪ್ಪ ಅವಳ ಬೆನ್ನಿನಿಂದ ಹುಟ್ಟಿದ. ಅವನ ನಡವಳಿಕೆ ಅವನ ಹುಟ್ಟಿನಂತೆ ವಿಶೇಷವಾಗಿತ್ತು. ಈ ದಂಪತಿಗಳಿಗೆ ಕೆಂಗುರಿ ಮಲ್ಲಪ್ಪ ಮತ್ತು ಸಿನ್ನಮ್ಮಳಿಗೆ ಮಾರಣ, ಮೈಲಣ್ಣ ಮತ್ತು ಮಾರಕ್ಕ ಎಂಬ ಮಕ್ಕಳಾದರೂ. ೩ ಜನ ಗಂಡುಮಕ್ಕಳಾದ ನಂತರ ಒಂದು ಹೆಣ್ಣುಮಗುವಾದರೆ ಆ ಮಗು ಮನೆಗೆ ಮಾರಿ ಎಂಬುದು ಅವರ ನಂಬಿಕೆಯಾಗಿರುತ್ತದೆ. ಮಾರಿಹಬ್ಬದ ಸಂದರ್ಭದಲ್ಲಿ ಕೆಂಗುರಿ ಮಲ್ಲಪ್ಪ ತಾನೇ ಬಲಿಯಾಗುತ್ತಾನೆ.

ಕೆಂಗುರಿ ಮಲ್ಲಪ್ಪ ಸತ್ತ ನಂತರ ಸಿನ್ನಮ್ಮನ ಐಶ್ವರ್ಯವೆಲ್ಲಾ ನಾಶವಾಗುತ್ತದೆ. ಏಳುದೊಡ್ಡಿ ಎತ್ತುಗಳು, ಕುರಿಗಳು ನಾಶವಾಗುತ್ತವೆ. ಹೀಗೆ ಇದ್ದ ಸಂದರ್ಭದಲ್ಲಿ ಜುಂಜಪ್ಪ ದೊಡ್ಡವನಾಗುತ್ತಾನೆ. ತನ್ನ ತಾಯಿಯನ್ನು ಎಲ್ಲಿಗೂ ಕೂಲಿಮಾಡಲು ಕಳುಹಿಸುವುದಿಲ್ಲ. ಅಣ್ಣಂದಿರ ಮನೆಗೆ ಹೋಗಬಾರದೆಂದು ಆಕೆಗೆ ತಿಳಿಸುತ್ತಾನೆ. ಜುಂಜಪ್ಪನ ಮಾತು ಕೇಳದಿದ್ದರಿಂದ ಆಕೆ ಅನೇಕ ಕಷ್ಟಗಳನ್ನು ಅನುಭವಿಸುತ್ತಾಳೆ.

ಅನೇಕ ಪರೀಕ್ಷೆಗಳನ್ನು ತನ್ನ ತಾಯಿಗೆ ಒಡ್ಡಿ ಅವಳ ಪರಿಶುದ್ಧತೆಯನ್ನು ನೋಡಿ ತನ್ನ ಮನೆಯಲ್ಲಿ ಇರಿಸಿಕೊಳ್ಳುತ್ತಾನೆ.

ತನ್ನ ಸೋದರ ಮಾವಂದಿರು ಕೊಟ್ಟಿದ್ದ ೭ ಕರುಗಳನ್ನು ಚೆನ್ನಾಗಿ ಸಾಕಿ ಏಳುಗುಂಡು ದನಗಳನ್ನು, ಏಳುಗುಂಡು ಹಸುಗಳ ಒಡೆಯನಾಗುತ್ತಾನೆ. ತನ್ನ ಸೋದರ ಮಾವಂದಿರಿಗೆ ಈತ ಸವಾಲನ್ನೆಸಗುತ್ತಾನೆ. ತನ್ನ ತಂಗಿ ಮಾರಕ್ಕನನ್ನು ತನ್ನ ಸಓದರ ಮಾವ ಕಡೆಹುಟ್ಟಿನ ಕಟ್ಟಾಣಿಗೆ ಕೊಟ್ಟು ವಿವಾಹ ಮಾಡುತ್ತಾನೆ. ಅವಳು ಮನೆಯಿಂದ ಹೋದ ತಕ್ಷಣ ಜುಂಜಪ್ಪನ ಐಶ್ವರ್ಯ ಹೆಚ್ಚಾಗುತ್ತದೆ.

ಈ ರೀತಿ ಅತ್ಯಂತ ಶ್ರೀಮಂತನಾದುದನ್ನು ಕಂಡ ತಮ್ಮಿಂದ ಕರುಗಳನ್ನು ಪಡೆದುದರಿಂದ ಅವನು ಪ್ರತಿಸ್ಪರ್ಧಿಯಾದುದು ಎಂದು ಭಾವಿಸಿ ಮಾವಂದಿರು ಹೊಟ್ಟೆಕಿಚ್ಚು ಬರುತ್ತದೆ. ಅವನನ್ನು ನಾಶಗೊಳಿಸಲು ಹಲವಾರು ಕುತಂತ್ರಗಳನ್ನು ಹೂಡುತ್ತಾರೆ. ದೊಡ್ಡ ಹುಲಿಕುಂಬೆ ಕೆರೆಯಲ್ಲಿನ ನೀರಿಗೆ ಮಾಟ ಮಾಡಿಸುತ್ತಾರೆ. ಜುಂಜಪ್ಪನ ದನಗಳನ್ನು ಕಾಯುತ್ತಿದ್ದ ಆತನ ತಮ್ಮಿಂದರಾದ ಮಾರಣ, ಮೈಲಣ್ಣರು ದೊಡ್ಡ ಹುಲಿಕಟ್ಟೆಯ ನೀರನ್ನು ದನಗಳಿಗೆ ಕುಡಿಸುವಷ್ಟರಲ್ಲಿ ಮಾರಕ್ಕನ ನೆರವಿನಿಂದ ಮುತ್ತಿನ ಕಡೆಗೋಲಿನಿಂದ ಕೆರೆ ನೀರು ಕಡೆಸುತ್ತಾನೆ. ಆವಾಗ ನೀರು ತಿಳಿಯಾಗುತ್ತದೆ. ಜೀವಂತವಾಗಿ ಹೂಳಿದ್ದ ಬಡಕಲು ಕರುವನ್ನು ಮಾವಂದಿರಿಗೆ ಒಪ್ಪಿಸುತ್ತಾನೆ. ಇದರಿಂದ ತಮ್ಮದಲ್ಲವೆಂದು ಈತನ ತಮ್ಮಿಂದರನ್ನು ಹೊಡೆಯುತ್ತಾರೆ. ಜುಂಜಪ್ಪ ತಾನೇ ಸ್ವತಃ ಕರುವನ್ನು ಕೊಂಡು ಹೋಗುತ್ತಾನೆ. ಆವಾಗಲೂ ಒಪ್ಪುವುದಿಲ್ಲ. ಆ ಕರುವನ್ನು ಮೇಯಿಸಿ ದೊಡ್ಡ ಹೋರಿಯಾಗಿ ಸಾಕುತ್ತಾನೆ, ಅದಕ್ಕೆ ಬಡಮೈಲಿ ಎಂಬ ಹೆಸರು ಇಡುತ್ತಾನೆ. ಇದರಿಂದ ಕೋಪಗೊಂಡ ಮಾವಂದಿರು ಮರಡಿ ರಂಗಣ್ಣನಿಂದ ಮಾಟ ಮಾಡಿಸಿ ಕೆಂಧೂಳಿ ಬರ, ಡೊಕ್ಕೆಯ ಬರ ಬರುವಂತೆ ಮಾಡುತ್ತಾರೆ. ಜುಂಜಪ್ಪ ರಂಗಣ್ಣನನ್ನು ಹೆದರಿಸಿ ಮಾಟ ಹಿಂದಕ್ಕೆ ತೆಗೆಯುವಂತೆ ಮಾಡುತ್ತಾನೆ. ಸೋದರ ಮಾವಂದಿರು ಮತ್ತೆ ಚೇಳೂರು ರಂಗಣ್ಣನ ನೆರವು ಪಡೆದು ಜುಂಜಪ್ಪನ ದನಗಳನ್ನು ಸದೆಬಡಿದು, ಬಡಮೈಲಿ ಹೋರಿಯನ್ನು ಚೇಳೂರು ಕೋಟೆಯ ಕಲ್ಲಿಗೆ ಕಟ್ಟಿಸುತ್ತಾರೆ. ಬಡಮೈಲಿ ಚೇಳೂರು ಕೋಟೆಯನನು ಭೇದಿಸಿಕೊಂಡು ಬಂದು ದನಗಳನ್ನು ಕಾಪಾಡುತ್ತದೆ. ಮಾರಣ್ಣ, ಮೈಲಣ್ಣರಿಗೆ ತೊಂದರೆಕೊಟ್ಟನು.

ಈ ಸಂದರ್ಭದಲ್ಲಿ ೩ ಗಿಂಗಲ ಕೇಡಿನ ನಿದ್ದೆಯಿಂದು ಎದ್ದು ಚೇಳೂರು ರಂಗಣ್ಣನೊಡನೆ ಪಗಡೆಯಾಟವಾಡಿ ಗೆದ್ದು ಅವನ ಎಲ್ಲಾ ಸ್ವತ್ತುಗಳನ್ನು ಗೆದ್ದುಕೊಳ್ಳುತ್ತಾನೆ. ಹೀಗೆಯೇ ಮುಂದೆ ಹುಲಿಕುಂಟೆ ತಮ್ಮಣ್ಣನ ಕಾವಲು, ತಾಳಿದುರ್ಗಿ ಕಾವಲುಗಳಲ್ಲಿ ದನಗಳನ್ನು ಮೇಯಿಸಿ ತನಗೆ ಎದುರಾದವರಿಗೆ ಬುದ್ಧಿ ಕಲಿಸುತ್ತಾನೆ.

ಹೊನ್ನ ಹಟ್ಟಿ ಅಲೇಗೌಡನ ಹೆಂಡತಿ ಜಾನಕಲ್ಲು ದೊಡ್ಡಕ್ಕನಿಗೆ ಬುದ್ಧಿ ಕಲಿಸುತ್ತಾನೆ. ಹೀಗೆ ಅನೇಕ ಹುಲ್ಲುಗಾವಲುಗಳಲ್ಲಿ ದನಗಳನ್ನು ಮೇಯಿಸಿ ತನ್ನ ಪರಾಕ್ರಮವನ್ನು ತೋರಿಸುತ್ತಿರುವಾಗ ೧೬ ವರ್ಷಗಳ ಕಾಲ ಏಕಮೇವ ಅದ್ವಿತೀಯನಾಗಿ ಜುಂಜಪ್ಪ ಅನೇಕ ಪವಾಡಗಳನ್ನು ಮೆರೆದು ಕೊನೆಗೆ ಅವನ ಸೋದರ ಮಾವಂದಿರು ಮಾರಕ್ಕನ ಮೂಲಕ ವಿಷಹಾಕಿಸಿ ಸಾಯಿಸುತ್ತಾರೆ. ಆತ ಸಾಯುವ ಮುನ್ನ ಸೋದರ ಮಾವಂದಿರ ಕಂಬಿಯ ಹಟ್ಟಿಯನ್ನು ಸುಡುಗಣ್ಣಿನಿಂದ ನಾಶಮಾಡಿ ತಾನು ಸಾಯುತ್ತಾನೆ. ಇದರಿಂದ ಜುಂಜಪ್ಪನನ್ನು ತಮ್ಮ ಆರಾಧ್ಯದೈವವೆಂದು ಪೂಜೆ ಮಾಡಲು ಕಾಡುಗೊಲ್ಲರು ಆರಂಭಿಸುತ್ತಾರೆ.

**ಜುಂಜಪ್ಪನ ಕಾವ್ಯದಲ್ಲಿ ಬರುವ ಗೊಲ್ಲರ ಕುಲದ ಹುಟ್ಟು**

ಒಂದು ದಿನ ಶ್ರೀವಿಷ್ಣು ಲಕ್ಷ್ಮಿ ವೈಕುಂಠದಲ್ಲಿ ತಾಂಬೂಲ ಮೆಲ್ಲುತ್ತಾ ಈ ರೀತಿ ಹೇಳುತ್ತಾನೆ. ನಾನು ಕಂಸಾಸುರನನ್ನು ಸಂಹಾರ ಮಾಡಲಿಕ್ಕೆ ಗೊಲ್ರು ಯಶೋಧಮ್ಮ ಅಂಬಳು ಮನೆ ಸೇರಿ ಅವನನ್ನು ನಾಶಮಾಡಬೇಕೆನ್ನುತ್ತಾನೆ. ಗೋವರ್ಧನಗಿರಿ ಎಂಬ ಒಂದು ಕಾಡಿದೆ, ಆ ಊರಿನಲ್ಲಿ ಮಹಾರಾಜನಿದ್ದಾನೆ ಅವನ ಮಗಳಾಗಿ ನೀನು ಹುಟ್ಟು, ನಾನು ಗುಡ್ಲು ಕಟ್ಟಿರುವ ಒಬ್ಬ ಬಡವನ ಮಗನಾಗುತ್ತೇನೆ ಎಂದು ಹೇಳುತ್ತಾನೆ.

ಹೀಗೆ ಇವನ ಮಾಯೆಯಂತೆ ಆ ಮಹಾರಾಜನ ಹೆಂಡತಿ ಗರ್ಭಿಣಿ-ಯಾಗುತ್ತಾಳೆ. ಮಹಾಲಕ್ಷ್ಮಿ ಅಲ್ಲಿ ಹುಟ್ಟುತ್ತಾಳೆ. ಈ ಕಡೆ ಬಡವನ ಮನೆಯಲ್ಲಿ ಶ್ರೀಕೃಷ್ಣ ಹುಟ್ಟುತ್ತಾನೆ. ಇವನು ಗೋಲಿ, ಗೆಜ್ಜುಗ ಆಡಿಕೊಂಡು ಬೆಳೆಯುತ್ತಾನೆ. ಹೀಗೆ ಕಾಲಕಳೆಯುತ್ತಾ ಲಕ್ಷ್ಮೀದೇವಿ ಋತುಮತಿಯಾಗುತ್ತಾಳೆ. ಸೂತಕ ಕಳೆದು ಸ್ನಾನಮಾಡಿಸಿ, ತಲೆಬಾಚಿ, ತಕ್ಕಡಿಯಲ್ಲಿಟ್ಟು ಒಂದೇ ಒಂದು ಮಲ್ಲಿಗೆ ಹೂವಿನ ತೂಕಕ್ಕೆ ಇರುತ್ತಾಳೆ ಲಕ್ಷ್ಮೀದೇವಿ. ಇವಳನ್ನು ೭ ಅಂತಸ್ತಿನಲ್ಲಿ ಇರಿಸುತ್ತಾರೆ. ಆದರೆ ಶ್ರೀಕೃಷ್ಣ ಇವಳಲ್ಲಿಗೆ ಬಂದು ಕೂಡಿ ಲಕ್ಷ್ಮಿದೇವಿ ಗರ್ಭಿಣಿಯಾಗುತ್ತಾಳೆ.

ಹೀಗಿರುವಾಗ ಒಂದು ದಿನ ಮತ್ತೆ ತೂಕಮಾಡಿದಾಗ ೨ ಮಲ್ಲಿಗೆ ಹೂವಿನಷ್ಟು ತೂಕವಾಗುತ್ತಾಳೆ. ಅಲ್ಲಿಗೆ ಇವಳು ಗರ್ಭಿಣಿಯಾಗಿದ್ದಾಳೆಂದು ತಿಳಿದು ಮಹಾರಾಜರಿಗೆ ತಿಳಿಸಿದರು. ಇದರಿಂದ ಅವಳನ್ನು ಕಣ್ಣಿಗೆ ಬಟ್ಟೆಕಟ್ಟಿ ಕಾಡಿಗೆ ಅಟ್ಟುವ ಶಿಕ್ಷೆಯಾಯಿತು. ಅವಳು ಒಂದು ಮಾತನ್ನು ತಂದೆಗೆ ಹೇಳುತ್ತಾಳೆ. ನಾನಿರುವುದು ಮಹಡಿಮೇಲೆ, ಸುತ್ತಲೂ ಪಾರುಗತ್ತಿಯವರಿರುತ್ತಾರೆ. ನನ್ನನ್ನು ಕೂಡಲು ಯಾರು ಬಂದಿಲ್ಲ. ಇದು ದೈವ ಮಾಯೆಯಿಂದ ಗರ್ಭಿಣಿಯಾಗಿದ್ದೇನೆ ಎನ್ನುತ್ತಾಳೆ.

ಗೋವರ್ಧನ ಗಿರಿಯಲ್ಲಿ ಶ್ರೀಕೃಷ್ಣನ ಹಸುವಿನ ಪಡ್ಡೆಯನ್ನು ಹಿಡಿದು ನನಗೆ ಹೇಗೆ ಮಾಡ್ತಿದ್ರೋ ಅದಕ್ಕೂ ಹಾಗೇ ಮಾಡಿ ಎಂದು ಹೇಳುತ್ತಾಳೆ. ಅದು ಒಂದು

ಮಲ್ಲಿಗೆ ಹೂವಿನಷ್ಟು ತೂಕ ಇದ್ರೆ ನನ್ನು ಕಾಢಿಗೆ ಕಳುಹಿಸು ಎನ್ನುತ್ತಾಳೆ. ಆವಾಗ ಶ್ರೀಕೃಷ್ಣನ ದನಗಳನ್ನು ಹಿಡಿಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ ಕೊನೆಗೆ ಬಡವನ ಮಗಹಿಡಿದು ತರುತ್ತಾನೆ. ಆ ಹಸುವನ್ನು ಪೂಜಿಸುವ ರೀತಿ ಮತ್ತು ಅದನ್ನು ನೆಲಮಾಳಿಗೆಯಲ್ಲಿ ಬಚ್ಚಿಡುವುದನ್ನು ಈ ಪದ್ಯ ತಿಳಿಸುತ್ತದೆ.

"ಮೈತೊಳೆದು ಅರಿಶಿನ ಕುಂಕುಮ ಇಟ್ಟು
ಪೂಜೆ ಮಾಡಿದ್ರು
ಪೂಜೆ ಮಾಡಿ ಸಿಂತ್ರೋಳಿಗಿಟ್ಟು
ಒಂದೇ ಒಂದು ಮಲ್ಲಿಗೆ ಹೂವಿನ ತೂಕಕಿತ್ತು ಅದು
ಹಸುವಿನಕರ
ಆವಾಗ
ಮೂರು ತಿಂಗಳಿಗಾಗುವಷ್ಟು ಹುಲ್ಲು
ನೀರು ಹಾಕಿಬಿಟ್ರು
ನೆಲಮಾಳಿಗೆಯಲ್ಲಿ ಹಾಕಿಬಿಟ್ಟು ಮುಚ್ಚಳಿಕೆ ಹಾಕಿಬಿಟ್ರು॥[೧]

ಹೀಗೆ ಮಾಡಿದಾಗ ಹಸುವಿನ ಕರು ಗರ್ಭಿಣಿಯಾಗುತ್ತದೆ. ಮತ್ತೆ ಅದನ್ನು ಹೊರ ತೆಗೆದು ಪೂಜೆ ಮಾಡಿ ತಕ್ಕಡಿಯಲ್ಲಿಡುತ್ತಾರೆ. ಅದು ೨ ಮಲ್ಲಿಗೆ ಹೂವಿನ ತೂಕ ಇರುತ್ತದೆ. ಆ ಮಹಾಲಕ್ಷ್ಮಿಯ ಮಾತಿನಂತೆ ಹಸು ಮತ್ತು ಮಹಾಲಕ್ಷ್ಮಿ ಇಬ್ಬರನ್ನು ಸಾಕುತ್ತಾರೆ. ಒಂದು ಸೋಮವಾರದಂದು ಆ ಹಸು ಒಂದು ಗಂಡು ಮಗುವನ್ನು ಹಾಕುತ್ತದೆ. ಮಹಾಲಕ್ಷ್ಮಿ ಒಂದು ಮಗುವನ್ನು ಹಡೆಯುತ್ತಾಳೆ. ಸಂಜೆ ಹುಟ್ಟಿದಕ್ಕೆ ಸನ್ಮತಿ ಎಂದು ಹೆಸರಿಡುತ್ತಾರೆ. ಮಹಾಲಕ್ಷ್ಮಿಯ ಮಗುವಿಗೆ ಸಿಕ್ಕಮುತ್ತಿ ಎಂದು ಮತ್ತೆ ಹಸು ಮತ್ತು ಮಹಾಲಕ್ಷ್ಮಿ ತಿರುಗಿ ಗರ್ಭಿಣಿಯಾಗುತ್ತಾರೆ. ಹಸು ಒಂದು ಹೆಣ್ಣುಮಗುವನ್ನು, ಮಹಾಲಕ್ಷ್ಮಿ ಒಂದು ಹೆಣ್ಣು ಮಗುವನ್ನು ಹಡೆದಳು. ಈ ಎರಡು ಮಕ್ಕಳನ್ನು ಸಾಕಿ ಪ್ರಾಯಕ್ಕೆ ಬಂದಾಗ "ಹಸುವಿನ ಕರೀನ ಮಗಳ್ನ ಲಕ್ಷ್ಮಿ ಮಗ್ನೆ ಮದ್ವೆ ಮಾಡಿದ್ರು; ಲಕ್ಷ್ಮಿ ಮಗಳ್ನ ಹಸುವಿನ ಮಗಂಗೆ ಮದ್ವೆ ಮಾಡಿದ್ರು"[೨] ಹಸುವಿನ ಕರುವಿನ ಮಕ್ಕಳನ್ನು ದೇವತೆಯರು ಬಂದು ಪೂಜಾರಿಗಳನ್ನಾಗಿ ಮಾಡಿಕೊಳ್ಳುತ್ತಾರೆ. ಅವರನ್ನು ಸಿತ್ತನಗಿರಿಯೆಂಬ ಕಾಡಿನಲ್ಲಿ ಕಾರಮುಳ್ಳು, ಕವಳೇಮುಳ್ಳು ಹಾಕಿ (ಬೇಲಿಕಟ್ಟಿ) ೨ ಗುಡಿಸಲನ್ನು ಕಟ್ಟುತ್ತಾರೆ. ಸಣ್ಣೇರು ಗೊಲ್ರೋನು ಸಣ್ಮುತ್ತಿಯಾಗುತ್ತಾನೆ. ಸಿಕ್ಕಮುತ್ತಿ ಎಂಬಾನು ಕಲ್ಡೇರು ಗೊಲ್ರೋನು, ಸಿತ್ತುರದೇವ್ರು, ಕಾದಮುಲಿಂಗ ಎರಡು ಕಟ್ಟೆಮನೆ

೧. ಬುಡಕಟ್ಟು ಮಹಾಕಾವ್ಯ, ಜುಂಜಪ್ಪ, (ಸಂ.) ಚೆಲುವರಾಜು, ಪುಟ – ೩೦.

೨. ಅದೇ, ಪುಟ – ೩೨.

ಮಾಡಿಕೊಂಡರು. ಕಾಟುಮುಲಿಂಗನ ಕಟ್ಟೆಮನೆ ಸಣ್ಣೀರು ಗೊಲ್ಲರೋನದು ಸಿತ್ತುರುದೇವರು ಕಲ್ದೇರು ಗೊಲ್ದರೋನು. ಹೀಗೆ ಗೊಲ್ಲರ ಕುಲ ಬೆಳೆಯುತ್ತದೆ.

**ದೈಮಾರನ ಕುಟುಂಬ**

ಸಿತ್ತುರ ದೇವರನ್ನು ಹಸುವಿನ ಹೊಟ್ಟೆಯಲ್ಲಿ ಹುಟ್ಟಿದ ಸನ್ಮುತಿ ಮತ್ತು ಸಿಕ್ಕಮುತ್ತಿ ಇಬ್ಬರು ಪೂಜೆ ಮಾಡಲು ಅರ್ಧ ಅರ್ಧ ಬಾಗ ಮಾಡಿಕೊಳ್ಳುತ್ತಾರೆ. ಕಾಲ ಕಳೆದಂತೆ ಅವರೊಟ್ಟೆಯೊಳಗೆ ದ್ಯಾವುರು ದೈಮಾರನೆಂಬ ಮಗ ಹುಟ್ಟುತ್ತಾನೆ. ಇವನಿಗೆ ೨ ಗಂಡುಮಕ್ಕಳು ಹುಟ್ಟುತ್ತಾರೆ. ಅವರಿಗೆ ಕರಿಯಲ್ಲಿ ಮತ್ತು ಕೆಂಪಲ್ಲಿ ಎಂದು ಹೆಸರಿಡುತ್ತಾರೆ. ಕರಿಯಲ್ಲಿಗೆ ಒಬ್ಬನೇ ಮಗ ಹುಟ್ಟುತ್ತಾನೆ. ಕೆಂಪಲ್ಲಿ ಅನ್ನೋವವನಿಗೆ ೬ ಜನ ಗಂಡುಮಕ್ಕಳು ಹುಟ್ಟುತ್ತಾರೆ. ಕರಿಯಲ್ಲಿಯ ಮಗ ಮಾರುಮುತ್ತಣ್ಣ ಒಬ್ಬನೆ ನೂರಾರು ದನಗಳನ್ನು ಕಾಯಲು ಕಾಡಿಗೆ ಹೋಗುತ್ತಾನೆ. ಕೆಂಪಲ್ಲಿಯ ೬ ಜನ ಮಕ್ಕಳಿಗೆ ಮದುವೆ ಮಾಡುತ್ತಾರೆ. ಆದರೆ ಅವರಿಗೆ ಮಕ್ಕಳಾಗುವುದಿಲ್ಲ, ವಂಶವೇ ಬೆಳೆಯುವುದಿಲ್ಲ. ಮಾರುಮುತ್ತಣ್ಣ, ಕಾಡಿನಲ್ಲಿ ಗೆಡ್ಡೆಗೆಣಸು, ಹಣ್ಣುಹಂಪಲು ತಿಂದು ಜೀವಿಸುತ್ತಿರುತ್ತಾನೆ. ಇದನ್ನರಿತ ೬ ಜನ ಮಕ್ಕಳು ಗೌರಸಂದ್ರದ ಮಾರಿಯ ಹತ್ತಿರ ಕಣಿ ಕೇಳುತ್ತಾರೆ.

ಆ ಮಾರಿಯು ಮಾರುಮುತ್ತಣ್ಣನಿಗೆ ಮದುವೆ ಮಾಡಿದರೆ ನಿಮ್ಮ ವಂಶ ಬೆಳೆಯುತ್ತದೆ ಎಂದು ಹೇಳುವುದು. ಈ ರೀತಿ ಮದುವೆ ಮಾಡುತ್ತೇವೆಂದು ಊರಿಗೆ ಬರುವಾಗ ಅವರ ತಾತ ದೈಮಾರನು ಸತ್ತುಹೋಗುತ್ತಾನೆ.

**ದೈಮಾರನ ಅಂತ್ಯಕ್ರಿಯೆ**

ದ್ಯಾವುರು ದೈಮಾರನು ಸತ್ತಾಗ ಇವರ ದೇವರುಗಳಾದ ಸಿತ್ತುರದೇವ್ರು ಮತ್ತು ಕಾಟುಮುಲಿಂಗ ಇವನನ್ನು ಹೂಳಬೇಡಿ ಎಂದು ಹೇಳುತ್ತಾರೆ. ತಳುಕಿನ ಗುಡ್ಡಕ್ಕೆ ಹೊತ್ತುಕೊಂಡು ಹೋಗಿ ಗುಂಡಿನೊಳಗೆ ಒಂದು ಬಂಡೆ ಮೇಲಾಕಿ ಅರೆದು ಬಿಡಬೇಕು. ಹೀಗೆ ಅರೆಯುವಾಗ ಅವನ ಎದೆಯಲ್ಲಿರುವ ಕೊಬ್ಬು ಕರಗಿ ಹಾಲಾಗಿ ಬರುತ್ತದೆ. ಆ ಹಾಲು ತಂದು ದನ, ಕುರಿಗಳ ಮೇಲೆ ತಂದು ಚೆಲ್ಲಬೇಕು. ಅವು ಜನಿಗೆ ದನ ಮತ್ತು ಜನಿಗೆ ಕುರಿಗಳಾಗುತ್ತವೆ. ಬಾಣಂತೀರು ಹೆತ್ತಾಗ ೩ ತಿಂಗಳು ಸೂತಗ ಕಳಕಂಡು ದೇವಸ್ಥಾನದೊಳಕ್ಕೆ ಬರಬೇಕಾದರೆ, ಆ ದನದ ಮತ್ತು ಕುರಿಯ ಗಂಜಳವನ್ನು ಕುಡಿಸಿದರೆ ಸೂತಕ ಹೋಗುತ್ತದೆ ಎಂಬುದು ಕಾಡುಗೊಲ್ಲರ ಒಂದು ನಂಬಿಕೆಯಾಗಿದೆ. ಇದರಂತೆ ಅವರು ಮಾಡಿದಾಗ ಏಳುದನಗಳ ಮೇಲೆ ಮತ್ತು ಏಳು ಕುರಿಗಳ ಮ್ಯಾಲೆ ದೈಮಾರನ ಎದೆಯ ಕೊಬ್ಬನ್ನು ಎರಚುತ್ತಾರೆ. ಹೀಗೆ ಜನಿಗೆ ದನ ಮತ್ತು ಜನಿಗೆ ಕುರಿ ಆಗುತ್ತವೆ. ಈ ರೀತಿಯಾಗಿ ಕಾಡುಗೊಲ್ಲರು ಹೆಣವನ್ನು ಹೂಳದೇ ಕಲ್ಲುಬಂಡೆಯ

ಮೇಲೆ ಇಡುವ ಪದ್ಧತಿ ಇಂದಿಗೂ ಕೂಡ ಇದೆ. ಹಾಗೂ ಬಸವನನ್ನು ಬಿಡುವುದು, ಜನಿಗೆ ಕುರಿಯನ್ನು ಬಿಡುವುದು ಇಂದೂ ಪ್ರಸ್ತುತವಾಗಿದೆ.

**ಗೊಲ್ಲರ ಕಬ್ಬಿಣದ ಬಾಕಿಗೆ ಮದುವೆ ಮಾಡುವುದು**

ಮಾರುಮುತ್ತಣ್ಣನ ಮದುವೆಗೆ ಒಪ್ಪಿಸಲು ೬ ಜನ ಅಣ್ಣಂದಿರು ಕೇಳುತ್ತಾರೆ. ಅವನು ಅಣ್ಣಯ್ಯ ನನ್ನ ಹಣೆಯಲ್ಲಿ ಬ್ರಹ್ಮ ಲಗ್ನ ಬರೆದಿಲ್ಲ. ನನಗ್ಯಾತಕೆ ಮದುವೆ, ನಾನು ಹುಟ್ಟಿದ ತಪ್ಪಿಗೆ ಮನುಷ್ಯರ ಮುಖ ನೋಡದಂತೆ ಅರಣ್ಯದಲ್ಲಿ ಇದ್ದೀನಿ ಮದುವೆ ಬೇಡ ಎಂದು ಹೇಳುತ್ತಾನೆ. ಮದುವೆಯಾಗದಿದ್ದರೆ ನಮ್ಮ ವಂಶಬೆಳೆಯಬಾರದೆ ಎಂದು ಅಣ್ಣಂದಿರು ಹಟ ಹಿಡಿದು ಮದುವೆಗೆ ಒಪ್ಪಿಸುತ್ತಾರೆ. ನಾನು ಸಾವಿರಾರು ಜನ ಇರುವ ಸಭೆಯಲ್ಲಿ ಲಗ್ನ ಮಾಡಿಕೊಳ್ಳಲು ಬರುವುದಿಲ್ಲ. ನನ್ನಲ್ಲಿ ಒಂದು ಕಬ್ಬಿಣ ಬಾಕೈತೆ, ಆ ಬಾಕ್ ಕೊಡುತ್ತೇನೆ. ಆ ಬಾಕ್‌ಗೆ ಹೆಣ್ಣು ಪಡೆದು ನೀವು ಧಾರಾಮುಹೂರ್ತ ಮಾಡ್ಕಂಡು ಬರಬೇಕು, ನಾನು ಮಾತ್ರ ಮದುವೆಯಲ್ಲಿ ನಿಂತುಕೊಳ್ಳಲು ಸಾಧ್ಯವಿಲ್ಲ. ನನಗೆ ನಾಚಿಕೆ ಆಗುತ್ತದೆ ಎಂಬುದನ್ನು ಈ ರೀತಿ ತಿಳಿಸಿದ್ದಾನೆ.

"ಕಾಡ್ನಾಗ ಹುಟ್ಟಿ ಕಾಡ್ನಾಗೆ ಬೆಳಕಂಡಿರೋನು ನಾನು
ಗಡ್ಡದಲ್ಲಿ ಗೀಜಗನ ಹಕ್ಕಿ ಗೂಡಿಕ್ಕಾವೆ
ಅವನಿಗೆ ಅರಣ್ಯದಲ್ಲಿ
ಇಂದ್ಗೆಡೆ ಈರ ಜಡೆ ವಾಲಿ ಬೆಳೆದುಬಿಟ್ಟಿದೆ
ಅರಣ್ಯದಲ್ಲಿ ಹಣ್ಣು ಹಂಪಲು ತಿಂದುಕೊಂಡು
ದನಕಾಯ್ಕಂಡು ಇದ್ದವನು
ಅದಕ್ಕೆ ನಾಚಿಕೆ ಇಕ್ಕಂಡು ಬರದಿಲ್ಲಾ ಅಂದುಬುಟ್ಟ"[೧]

ಈ ರೀತಿ ಕಾಡುಗೊಲ್ಲರು ಕಾಡಿನಲ್ಲಿ ವಾಸಿಸುವ ರೀತಿಯನ್ನು ಕಾಣಬಹುದು. ಅವರ ವೇಷಭೂಷಣ ಇದ್ದದ್ದರಿಂದ ಹೋಗಲಿ ನಿನ್ನ ಕೈಯಲ್ಲಿರುವ ಬಾಕನ್ನು ಕೊಡಯ್ಯ ಎಂದು ಕೇಳಿದಾಗ ಕಬ್ಬಿಣದ ಬಾಕನ್ನು ಅವರ ಅಣ್ಣನ ಕೈಗೆ ಕೊಡುತ್ತಾರೆ.

"ಆಗಲೆ ಶಂಕರನೆ
ಬಾಕಿಗೂ ಮೂರ್ತವ
ಮಾಡ್ತೀವಂದು
ಅವನ ಕೈಯಾಳಗಿದ್ದಂತ

---

೧. ಬುಡಕಟ್ಟು ಜುಂಜಪ್ಪ – ಸಂ. ಚೆಲುವರಾಜು, ಪುಟ ೪೧.

ಕಬ್ಬುಣದ ಬಾಕನ್ನು
ತಂದಾರೊ ಸ್ವಾಮೀಗೆ
ಆಗಲೆ ತಂದವುರ ಮನೆಯಾಳಗಿದ್ದಾರಯ್ಯೋ ಗಳಿಗಾಗೋ॥[೧]

ಹೀಗೆ ಅವರು ಆ ಬಾಕನ್ನು ತಂದು ಸಿತ್ತುರನು ಕಾಟುಮಲಿಂಗನಟ್ಟಿಗೆ ಹೆಣ್ಣು ಕೇಳಲು ಹೋಗುತ್ತಾರೆ. ಸಾತೆಮ್ಮನನ್ನು ಶಾಸ್ತ್ರಸಂಬಂಧದಂತೆ "ಮಾರ್ನೋರು ಗೊಲ್ದೊರು ನೀವಯ್ಯ ಸನ್ನೂರು ಗೊಲ್ದುರು ನಾವು"[೨] ಎಂದು ಹೇಳಿದಾಗ ಶಾಸ್ತ್ರ ಕೇಳಲು ಬ್ರಾಹ್ಮಣರ ಹತ್ತಿರಕ್ಕೆ ಹೋಗಬೇಡಿ[೩] ಎಂದು ಹೇಳುತ್ತಾರೆ. ಇವರು ಪ್ರಕೃತಿಯಲ್ಲಿ ಬೆಳೆಯುವ ಸಸ್ಯಶಾಸ್ತ್ರಗಳಿಂದಲೇ ಪಂಚಾಂಗವನ್ನು ನೋಡಿಕೊಳ್ಳುತ್ತಾರೆ.

"ಆಗಲೆ ಶಂಕರನೆ
ಆವೊತ್ತು ಸಾಯಿನುಕಾಲ
ಒಂದು ಚೆಂಬುನೀರು
ಬೆಲ್ಲದುಂಡೆ ಅಡಿಕೆ ಎಲೆ
ಅರಿಶಿನ ಕುಂಕುಮ
ತಕ್ಕಂಡು ಶಂಕರನೆ
ಒಂದಂದ್ಗಾರ ಮಾಡಿಕಂಡು ಹೋಗಿ
ಅದುಕೆ ಉಗುಣೆ ಗಿಡುಕೆ ಪೂಜೆ ಮಾಡುವುರೆ
ಕುಡಿ ಮೂಡಗಡಿಕೆ
ಹೊತ್ತುಟ್ಟಕಡಿಗೆ ಒಡೆದಿರೋ ಬಳ್ಳಿ ನೋಡಿ
ಮೂರು ಗೆರೆಯನ್ನು ಒಡೆದಾರೋ ಸ್ವಾಮಿ ಅವನಿಗೋ॥

ಈ ರೀತಿ ಉಗುಣೆ ಗಿಡವನ್ನು ಪೂಜಿಸಿ ಆ ಮೂರು ಗೆರೆಯನ್ನು ದಾಟಿ ಆಚೆ ಬಂದರೆ ಅವರಿಗೆ ಹೆಣ್ಣು ಕೊಡುತ್ತಾರೆ ಎಂಬ ನಂಬಿಕೆ ಇದೆ ಮತ್ತು ಹೆಣ್ಣು ಇವರಿಗೆ ಶಾಸ್ತ್ರೋಕ್ತವಾಗಿ ಚೆನ್ನಾಗಿದೆ ಎಂಬ ನಂಬಿಕೆಯೂ ಕಾಡುಗೊಲ್ಲರಲ್ಲಿದೆ. ಹೀಗೆ ಕಾಡುಗೊಲ್ಲರು ಇಂತಹ ಸಂಪ್ರದಾಯವನ್ನು ಇಂದಿಗೂ ಇಟ್ಟುಕೊಂಡು ಬದುಕಿದ್ದಾರೆ.

ಒಂದು ಭಾನುವಾರದ ದಿನ ದೇವಸ್ಥಾನಕ್ಕೆ ಬೇಕಾದ ಹಣವನೆಲ್ಲಾಕೊಟ್ಟು ಮೂರು ದುಡ್ಡು ಕಾಣಿಕೆ ಕಟ್ಟಿ ದೇವರ ಹಣೆಗೆ ಹಚ್ಚಿ ಪಟ್ಟದಟ್ಟಿ ಅಂಬೋನು ಆ

---

೧. ಬುಡಕಟ್ಟು ಜುಂಜಪ್ಪ – ಸಂ. ಚೆಲುವರಾಜು, ಪುಟ – ೪೩.

೨. ಅದೇ, ಪುಟ – ೪೫.

೩. ಕರ್ನಾಟಕ ಜನಪದ ಮಹಾಕಾವ್ಯಗಳು ತೀ.ನಂ.ಶಂಕರನಾರಾಯಣ, ಪುಟ– ೧೭.

ಕಬ್ಬಿಣದ ಬಾಕ ಕೈಯಲ್ಲಿ ಹಿಡಿಕೊಂಡು ಹೋಗಿ, ಕಬ್ಬಿಣದ ಬಾಕಿಗೆ ಜೋತ್ರ ಪಂಚೆ ಉಡಿಸಿ, ಕಂಬಿ ಪೇಟ ಸುತ್ತಿ ಅವನ ಕೈಯಿಂದ ಕಬ್ಬಿದ ಬಾಕ್ ಇಡುಕ್ಕೊಂಡು ಮದುವೆಗೆ ಹೊರಟು ಹೆಣ್ಣನ್ನು ಕರೆದು ಹೋಗಿ ಅರಮನೆಯಲ್ಲಿ ರತ್ನಗಂಬಳಿಯಲ್ಲಿ ಮನೆತುಂಬಿಸಿಕೊಳ್ಳುತ್ತಾರೆ.

**ಕೆಂಗರು ಮಲ್ಲಪ್ಪನ ಹುಟ್ಟು**

ಪಾರ್ವತಿ ಪರಮೇಶ್ವರರು ರಥದಮೇಲೆ ಹೋಗುವಂತಹ ಸಂದರ್ಭದಲ್ಲಿ ಸಾತಮ್ಮ ಮಾರುಮುತ್ತಣ್ಣ ಎಂಬ ಶಿವಭಕ್ತರು. ಇವರ ಕಣ್ಣಿಗೆ ಬೀಳುತ್ತಾರೆ. ಇವರನ್ನು ಬದುಕಿಸಿದ ರೀತಿ ಆಶ್ಚರ್ಯವನ್ನುಂಟುಮಾಡುತ್ತದೆ. ಬೆಟ್ಟದ ಮೇಲಿಂದ ೨ ಶವಗಳು ಬಿದ್ದಿದ್ದನ್ನು ನೋಡಿದ ಶಿವ ತನ್ನ ಶಕ್ತಿಯಿಂದ ಬದುಕಿಸುತ್ತಾನೆ. ನೀನು ಇಬ್ಬರನ್ನು ಬದುಕಿಸಿದೆ. ಆದರೆ ನಿಮ್ಮ ಪಾದ ಸೇವೆಗೆ ನೇಮಿಸಿಕೋ ಎಂದಾಗ ಶಿವನು ಸಾತಮ್ಮನನ್ನು ಸ್ವಾತಿ, ವಿಸಾತಿ ಮಳೆಯಾಗಿ ಮಾಡುತ್ತಾನೆ, ಮಾರುಮುತ್ತಣ್ಣನನ್ನು ಹೂವಿನ ತೋಟಕ್ಕೆ ನೀರು ಹಾಕಲು ನೇಮಿಸಿಕೊಳ್ಳುತ್ತಾನೆ. ಆದರೆ ರಥದಲ್ಲಿ ಮುಂದೆ ಹೋಗುವಾಗ ಒಂದು ಮಗುವಿನ ಆರ್ತನಾದ ಕೇಳಿಸುತ್ತದೆ. ಅದು ಸಾತೆಮ್ಮನ ಮಗುವಾಗಿತ್ತು. ಶಿವ ಅದನ್ನು ಒಂದು ಆಲದ ಮರಕ್ಕೆ ಜೋಲಿಕಟ್ಟಿ, ಆ ಮರಕ್ಕೆ ಏಳುಹೆಡೆ ಸರ್ಪ ಕಾವಲಿಟ್ಟು, ಸಿಟ್ಟಿ ಜೇನು ಕಿತ್ಕೊಂಡು ಬಂದು ಆ ಮಗುವಿನ ನೇರಕ್ಕೆ ಕಟ್ಟಿ ಗರುಡನಿಗೆ ನೇಮಿಸುತ್ತಾನೆ. ಮಗು ಅತ್ತಾಗ ಅದಕ್ಕೆ ಜೇನಿನ ತಲೆಗೆ ಕುಕ್ಕು ಎಂದು ಹೇಳಿ, ಶಿವ ಆ ಮಗುವಿಗೆ ಕೆಂಗರ ಮಲ್ಲಗೌಡ ಅಂತ ಹೆಸರಿಡುತ್ತಾನೆ. ಆ ಮರದ ಹತ್ತಿರ ಕೆಂಗರು ಮಲ್ಲಗೌಡನ ದೊಡ್ಡಪ್ಪ ಪಟ್ಟೇದಟ್ಟೇನು ಎಂಬುವವನು ಮಗುವನ್ನು ರಕ್ಷಿಸುತ್ತಾನೆ. ಅಂಬೋನು ಹೋಗುತ್ತಾನೆ. ಆ ಮಗುವನ್ನು ಮೂರು ತಾವು ಕೂರಿಸಿ, ಊರುಬಾಗಲ ಹತ್ತಿ ಬಾಣಂತಿರನ್ನು ಅಲ್ಲಿ ಕೂರಿಸುತ್ತಾರೆ. ಉದಿಬಾಗಲು ಬಿಟ್ಟು ಆ ಕಡೆ ೩ ತಿಂಗಳು ಕೂರಿಸಿ ಜನಿಗೆ ಹಾಲು ತಂದು ಕುಡಿಸಿ ಜೆನಿಗೆ ಹಸು ಗಂಜಲವನ್ನು ಕುಡಿಸಿ ಸೂತಗವನ್ನು ಕಳೆಯುತ್ತಾರೆ. ಸಿತ್ತುರು ದೇವರ ಸ್ಥಾನದಲ್ಲಿ ಮಗುವಿಗೆ ನಾಮಕರಣ ಮಾಡುವುದು ವಾಡಿಕೆ ಇದೆ. ಇಲ್ಲಿಗೆ ಹರಿಕೆ ಹಣಕೊಟ್ಟು ಪೂಜೆ ಮಾಡಿಸಿ ನಾಮಕರಣ ಮಾಡಿಸುತ್ತಾರೆ.

ಕೆಂಗರು ಮಲ್ಲೇಗೌಡನೆಂದು
ಹೆಸರಿಟ್ಟರು ಶಂಕರಗೆ
ಹೆಸರಿಟ್ಟ ಭಗವಂತ
ಆ ಮಗುವನ್ನು

ಈಮಗುಟಿ
ಹಾಲುಕೊಟ್ಟು ಸಾಕಿತಣ್ಣ
ಅವರ ದೊಡ್ಡಪ್ಪಗಳು
ನೆಲಕೆ ಬಿದ್ದರೆ ಕೆಡುತಾನಂಬಂಗೆ
ರನ್ನದ ಕೋಲಾಟ
ಚಿನ್ನದ ಬಂಗೂರಿ
ವಜ್ಜರದಂಗಿ
ಇವೆಲ್ಲಾ ಮಾಡಿಸಿಕ್ಕವುರೆ
ಮಗುವಿಗೆ ಶಿವುನೀಗೋ॥

ಹೀಗೆ ಸಾತಮ್ಮ ಮತ್ತು ಮೂರುಮುತ್ತಣ್ಣ ಎಂಬ ದಂಪತಿಗಳಿಗೆ ಜನಿಸಿದ ಮಗುವನ್ನು ಶಿವನೇ ಕಾಪಾಡಿ ಅದನ್ನು ಅವರ ದೊಡ್ಡಪ್ಪಂದಿರುಗಳು ಸಾಕುವಂತೆ ಮಾಡುತ್ತಾರೆ. ನಂತರ ಈತನನ್ನು ಘೋರವಾದ ಅರಣ್ಯದಲ್ಲಿ ಬಿಟ್ಟು ಹೋಗುವಂತಹ ಪ್ರಸಂಗ ಕಂಡುಬರುತ್ತದೆ. ಆ ಮಗುವನ್ನು ಸುಮಾರು ೫ ವರ್ಷದ ಮಗುವನ್ನು ಹಿರಿಯೂರು ಪ್ಯಾಟಿಗೆ ಕರೆದುಕೊಂಡು ಹೋಗ್ತೀವಿ ಅಂತ ಹೇಳಿ ಘೋರ ಅರಣ್ಯದಲ್ಲಿ ಮಲಗಿಸಿ ಹೋಗುತ್ತಾರೆ. ನಂತರ ಅಂಬೇರಾಯ ತುಂಬೇರಾಯ ಅನ್ನುವ ಅಜ್ಜಿ–ಅಜ್ಜ ಇವನನ್ನು ನೋಡಿ ದನಗಳನ್ನು ಕಾಯಲು ನೇಮಿಸುತ್ತಾರೆ. ನಂತರ ಹೊನ್ನಹಟ್ಟಿ ಅಲೇಗೌಡ ಮತ್ತು ಜಾನಕಲ್ಲು ದೊಡ್ಡಕ್ಕನ ಮನೆಯಲ್ಲಿ ಈತನು ಬೆಳೆಯುತ್ತಾನೆ. ಅಲ್ಲೇ ಅವನು ಒಂದು ದಿನ ೭ ಕರುಗಳನ್ನು ತಂದು ಸಾಕಿ ಅದರಿಂದಲೇ ದನಗಳ ಒಡೆಯನಾಗುತ್ತಾನೆ.

**ಕೆಂಗರು ಮಲ್ಲೇಗೌಡನ ಮದುವೆ**

ಹೊನ್ನಹಟ್ಟಿಯ ಅಲೇಗೌಡನ ಮಕ್ಕಳಾದ ಸಿಕ್ಕಾಲಪ್ಪ, ದೊಡ್ಡಾಲಪ್ಪ ಎಂಬುವರು. ತಮ್ಮ ತಂದೆಗೆ ವಯಸ್ಸಾಯಿತೆಂದು ಭಾವಿಸಿ ನಮಗೆ ಮದುವೆ ಬೇಕು ಎಂದು ತಳವಾರ ಬೊಮ್ಮಣ್ಣನಿಗೆ ಹೇಳುತ್ತಾರೆ. ಅವನು ಆ ಊರ ಗೌಡನನ್ನು ಕೇಳಿದಾಗ ಮೊದಲು ಹುಟ್ಟಿದ ಕೆಂಗರು ಮಲ್ಲೇಗೌಡನಿಗೆ ಮದುವೆ ಮಾಡಬೇಕು ಎಂದು ಹೇಳುತ್ತಾನೆ. ಅವನು ದನ ಹೊಡೆದುಕೊಂಡು ಕಾಡಿಗೆ ಹೋಗಿರುತ್ತಾನೆ. ಆತನು ಎಲ್ಲಿರುವನೆಂದು ತಿಳಿದಿರುವುದಿಲ್ಲ. ಹೊನ್ನಹಟ್ಟಿ ಅಲೇಗೌಡನ ಕನಸಿನಲ್ಲಿ ಗೌರಸಂದ್ರದ ಮಾರಿ ಅವನಿರುವಿಕೆಯನ್ನು ತಿಳಿಸುತ್ತಾಳೆ. ಅಲೇಗೌಡನು ಸಿಕ್ಕಾಲಪ್ಪ ಮತ್ತು ದೊಡ್ಡಾಲಪ್ಪನಿಗೆ ರೊಟ್ಟಿ ಬುತ್ತಿಕಟ್ಟಿ ಅವನನ್ನು ಕರೆತರಲು ಕಳುಹಿಸುತ್ತಾನೆ. ಗೌರಸಂದ್ರದ ಮಾರಿ ಹೆಣ್ಣಿನ ವೇಷಧರಿಸಿ ಕೊಂಕಿ ಜರುಮಲೆಯಲ್ಲಿರುವ ಕೆಂಗರು ಮಲ್ಲೇಗೌಡನನ್ನು ಎಚ್ಚರಿಸುತ್ತಾಳೆ. ಆತನ ತಮ್ಮಂದರು ಬಂದು ನೀವು ಮದುವೆ ಆಗಬೇಕೆಂದು ಆತನಲ್ಲಿ ಬೇಡಿ–

ಕೊಳ್ಳುತ್ತಾರೆ. ನಾನು ಗೊಲ್ಲೋರ ಜಾತಿಗೆ ಸೇರಿದವನು. ನನಗೆ ಒಕ್ಕಲಿಗರ ಮನೆ ಹೆಣ್ಣುಕೊಡಲ್ಲ. ಹಾಗಾಗಿ ನನಗೆ ಮದುವೆ ಬೇಡ ಎನ್ನುತ್ತಾನೆ. ಕಳುವರಳ್ಳಿ ಪ್ಯಾಟಿಯಲ್ಲಿ ಕಂಬೇರು ಗೊಲ್ದರ ಹಟ್ಟಿ ಇದೆ. ಅವರು ೭ ಜನ ಕಂಬೇರು ಗೊಲ್ಲುರು ಒಬ್ಬ ತಂಗಿ ಸಿನ್ನಮ್ಮ ಎಂಬಾಕೆ ಅವಳು ಋತುಮತಿಯಾಗಿ ೧೨ ವರ್ಷ ತವರು ಮನೆಯಲ್ಲಿದ್ದಾಳೆ. ಆಯಮ್ಮನ ಮದುವೆ ಮಾಢಿಕೊಡಿ ಎಂದಾಗ

ಅಲೇಗೌಡನಿಗೆ ಅವರ ಮನೇಗೆ ಹೋಗಿ ಹೆಣ್ಣು ಕೇಳಿ ಎಂಬ ವಿಚಾರವನ್ನು ಗೌರಸಂದ್ರದ ಮಾರಿ ಹೇಳುತ್ತಾಳೆ. ಒಕ್ಕಲು ಮಗನ ಮನಿಗೆ ನನ್ನ ತಂಗಿ ಸೊಸೆ ಆಗಬೇಕಾಗುತ್ತದೆ ಎಂದು ಅವರ ಅಣ್ಣಂದಿರು ಒಂದು ಉಪಾಯ ಹುಡುಕುತ್ತಾರೆ ಈ ಕೆಳಕಂಡಂತಿದೆ.

ಬ್ಯಾಡವಮ್ಮ ಇದಕ್ಕೊಂದುಪಾಯ
ಮಾಡಬೇಕು ನಾವು
ನಾವು ಹನ್ನೆರಡು ಪಲ್ಲಕ್ಕಿ ಹಾಕಬೇಕಣ್ಣ
ಅವರು ಹನ್ನೆರಡು ಪಲ್ಲಕ್ಕಿ ಹಾಕಲಿ
ಇಪತ್ನಾಲ್ಕು ಪಲ್ಲಕ್ಕಿ ಅನ್ನ
ಗಂಡ್ನಿಂದೆ ಬಂದರೆ
ಹೆಣ್ಣುಕೊಡುವೆಂಬಾನಣ್ಣ
ಅಂಗಂದ್ರೆ ಅನ್ನ ಉಂಬಾಕಾಗದೆ
ಹೆಣ್ಣು ಬಿಟ್ಹೋಗುತಾರಂದು
ಮಾತಾಡಿಕಂಡುರಣ್ಣ
ಜುಂಜಪ್ಪನ ಮಾವುಗಳು
ಆಗಲೆಗಳಿಗಾಗೋ॥[೧]

ಈ ರೀತಿಯಾಗಿ ಉಪಾಯ ಮಾಡಿದರೂ ಕೂಡ ಅಲೇಗೌಡನು ಒಪ್ಪಿಕೊಳ್ಳುತ್ತಾನೆ. ಇದನ್ನು ಕೇಳಿದಂತಹ ವಿಷ್ಣು ಭೂತನ ಅವತಾರವನ್ನು ತಾಳುತ್ತಾನೆ. ಮುರುಲಳ್ಳಿ ಭೂತಶಾಸ್ತ್ರಕ್ಕೆ ಒಂದು ಅಗುಳು ಅನ್ನವನ್ನು ಬಿಡದೆ ಎಲ್ಲಾವನ್ನು ಉಣ್ಣುತ್ತಾನೆ. ಭೂತ ಮತ್ತೆ ಅನ್ನವನ್ನು ಕೇಳಿದಾಗ ಅವರು ಅವರ ಕೈಕಾಲುಗಳಿಗೆ ಅಡ್ಡಬೀಳುತ್ತಾರೆ. ಸಿನ್ನಮ್ಮನಿಗೂ ಕೆಂಗರ ಮಲ್ಲೇಗೌಡನಿಗೂ ಆಗಲೆ ಶಂಕರನೆ ಮದುವೆ ಮಾಡಿದ್ದಾನ ಎಂದು ಹೇಳುತ್ತಾರೆ. ಸೋಮವಾರದ ದಿನ ಮೂರ್ತ ಬೀಳುತ್ತಿದ್ದಂಗೆ ಅಲೇಗೌಡನಿಗೆ

---

೧. ಬುಡಕಟ್ಟು ಮಹಾಕಾವ್ಯ ಜುಂಜಪ್ಪ – ಸಂ. ಚಿಎಲುವರಾಜು, ಪುಟ – ೧೨೫.

ಹೇಳುತ್ತಾನೆ. ಕೆಂಗರು ಮಲ್ಲೇಗೌಡ ತನ್ನ ತಂದೆಗೆ ಈ ರೀತಿ ಹೇಳುತ್ತಾನೆ. ನಿನಗೆ ಸೊಸೆ ಬೇಕೆನ್ನುವ ಆಸೆಯಿಂದ ನಾನು ಈ ಮದುವೆ ಮಾಡಿಕೊಂಡೆನು. ಇನ್ನು ನನ್ನ ದನಗಳು ಹಸಿದುಕೊಂಡಿವೆ. ಆದ್ದರಿಂದ ನಾನು ಕಾಡಿಗೆ ಹೋಗುತ್ತೇನೆ ಎಂದು ದನಗಳನ್ನು ಕಾಯಲು ಹೋಗುತ್ತಾನೆ.

ಕೆಂಗರು ಮಲ್ಲೇಗೌಡ ದನಗಳನ್ನು ಮೇಯಿಸಲು ಹೋದವನು ೧೨ ವರ್ಷವಾದರೂ ಮನೆಗೆ ಬರುವುದಿಲ್ಲ. ಅತ್ತೆಮಾವಂದಿರಿಗೆ ಅಡುಗೆಮಾಡಿಕೊಂಡು ಸಿನ್ನಮ್ಮ ಸುಖವಾಗಿದ್ದಳು. ಗಂಡ ಮನೆಗೆ ಬರಲಿಲ್ಲವಾದ್ದರಿಂದ ಆ ಸಿನ್ನಮ್ಮನಿಗೆ ಮಕ್ಕಳಾಗಲಿಲ್ಲ. ಹೀಗೆ ಅವಳನ್ನು ಬಂಜೆ ಎಂದು ಊರಿನ ಜನರೆಲ್ಲಾ ಆಡಿಕೊಳ್ಳುತ್ತಿದ್ದರು. ಅತ್ತಿಗೆ ನಾದಿನಿಯರು, ಊರಿನ ಹೆಂಗಸರಿಂದ, ತವರು ಮನೇಲಿ ಕೂಡ ಅವರ ಅತ್ತಿಗೆಯರು ಸಿನ್ನಮ್ಮನ ನೋಡಿ ಈ ರೀತಿ ಹೇಳುತ್ತಾರೆ. "ಬರ್ರೇ ಎದ್ದುಮಕ್ಕೆ ಎದ್ದು ಬಂಜೇಮಕ ಯಾಕೆ ನೋಡುತ್ತೀರ"[೧] ಎನ್ನುತ್ತಾರೆ. ಇದರಿಂದ ಅವರ ಹಿರಿಯ ಅಣ್ಣ ಹೊಡೆದು ಅವರ ಅತ್ತಿಗೆಯ ಜೊತೆ ಗಲಾಟೆ ಮಾಡುತ್ತಾನೆ. ಹೀಗೆ ಕೆಂಗೇರು ಮಲ್ಲಪ್ಪಗೌಡ ಮತ್ತು ಸಿನ್ನಮ್ಮರ ವಿವಾಹವಾಗುತ್ತದೆ.

**ಜುಂಜಪ್ಪನ ಹುಟ್ಟು ಮತ್ತು ಬೆಳವಣಿಗೆ**

ಒಂದು ದಿನ ಜೋಗಿ ಭಿಕ್ಷೆಗೆ ಬರುತ್ತಾನೆ. ಸಿನ್ನಮ್ಮ ಅಕ್ಕಿಬೇಳೆ ಕೊಡಲು ಬಂದಾಗ ಮಕ್ಕಳೆಷ್ಟು ಎಂದು ಆಕೆಯನ್ನು ವಿಚಾರಿಸುತ್ತಾನೆ. ಇಲ್ಲ ಎಂದಾಗ ಬಂಜೆಯಿಂದ ಭಿಕ್ಷೆಯನ್ನು ತೆಗೆದುಕೊಳ್ಳಲು ನಿರಾಕರಿಸಿ ಹೋಗುತ್ತಾನೆ. ಇದರಿಂದ ಸಿನ್ನಮ್ಮನಿಗೆ ದುಃಖಬರುತ್ತದೆ. ಇದರಿಂದ ನೊಂದ ಸಿನ್ನಮ್ಮ ಅವರ ಅತ್ತೆ ಮಾವನಿಗೆ ನಿದ್ರೆ ಬಂದ ಮೇಲೆ ಅರಣ್ಯಕ್ಕೆ ಪ್ರಾಣಬಿಡಲು ಹೋಗುತ್ತಾಳೆ. ಮಡುವಿಗೆ ಬೀಳಲೂ ಹೋದಾಗ ಗಂಗಮ್ಮ ಜಲ ಬತ್ತಿ ಹೋಗುವಂತೆ ಮಾಡುತ್ತಾಳೆ. ಅಲ್ಲಿ ಕೊರವಂಜಿ ಕಣಿಯನ್ನು ಹೇಳುತ್ತಾಳೆ. ಹೇಗೆಂದರೆ

ಕಣಿಯನ್ನೆ ಹೇಳವುಳಣ್ಣ
ಕೊರಮೂತಿ ಶಂಕರನೆ
ಕೈತಾರೆ ಕೈತಾರೆ
ಕೈತಾರೆ ಮಗಳೆ
ಕೈನೋಡಿ ನಾನೊಂದು
ಕಣಿಯ ಹೇಳುವೆನು

---

೧. ಬುಡಕಟ್ಟು ಮಹಾಕಾವ್ಯ ಜುಂಜಪ್ಪ – ಸಂ. ಚಲುವರಾಜು, ಪುಟ – ೧೩೨.

ಮೂಡಲ ಸೀಮೆಗೆ
ಹೋಗಿದ್ದ ಮಗುಳೆ
ಮಲಗಿದ್ದೆ ಮಗಳೆ
ತುರುಕಾರ ದೆವ್ವ ಬಂದು
ಹಿಡಿದಿದ್ದುವೆನೆ
ಈ ಅರಣ್ಯಕ್ಕೆ ಯಾಕೆ ಬಂದೆ
ಸಿನ್ನಮ್ಮ ಪ್ರಾಣ ಬಿಡುವುದಕೆ
ಅಂದಾಲೋ ಕೊರವಂಜಿ॥[೧]

ಈ ರೀತಿಯಾಗಿ ಶಾಸ್ತ್ರ ಹೇಳಿ ಕೊರವಂಜಿ ಮಕ್ಕಳ ಫಲಬೇಕೆಂದಾಗ ನೀನು ಈಶ್ವರನನ್ನು ಕುರಿತು ತಪಸ್ಸು ಮಾಡು ಎನ್ನುತ್ತಾಳೆ. ಇದರಿಂದ ಅವಳು ತಪಸ್ಸನ್ನು ಮಾಡುತ್ತಾಳೆ. ಈಶ್ವರನು ಪ್ರತ್ಯಕ್ಷನಾಗಿ "ಮೂರು ಗಂಡುಗಳ ಹಿಂದೆ ಒಂದು ಹೆಣ್ಣು ಹುಟ್ಲಿ ಅಂದರೆ ಶಂಕರ"[೨] ಎಂದು ಆಜ್ಞೆಯನ್ನು ಮಾಡುತ್ತಾನೆ. ಈ ವರದಿಂದ ಜುಂಜಪ್ಪನು ಈಶ್ವರನ ಮಗನಾದ ವೀರಭದ್ರನು ಕೈಲಾಸದಲ್ಲಿ ಅತೀ ಪುಂಡನಾಗಿ ತೊಂದರೆ ಕೊಡುತ್ತಿರುತ್ತಾನೆ. ಅವನಿಗೆ ಸಿನ್ನಮ್ಮನ ನಡುಬೆನ್ನಿನಲ್ಲಿ ಹುಟ್ಟಿ ಜುಂಜಪ್ಪನೆಂಬ ಹೆಸರು ಪಡೆದು ನೀನು ೧೬ ವರ್ಷಗಳ ಕಾಲ ಭೂಲೋಕದಲ್ಲಿ ಏಳು ಲಕ್ಷದ ದನಗಳ ಕಾಯಬೇಕು ಎಂದು ಹೇಳುತ್ತಾನೆ. ನೀನು ಏಳು ಲಕ್ಷದಲ್ಲಿ ಒಂದು ದನ ಕೊಲ್ಲುವುದಾದರೆ ಏಳು ಜನುಮದಲ್ಲಿ ಸಾಯಬೇಕು, ಸ್ತ್ರೀಹತ್ಯೆ, ಗೋಹತ್ಯೆ ಏನೂ ಮಾಡುವಂತಿಲ್ಲ. ಹುಟ್ಟುವಾಗ ಹೇಗೆ ಹುಟ್ಟುತ್ತಿಯೋ ಅದೇ ರೀತಿ ಕೈಲಾಸಕ್ಕೆ ನೀನು ಬರುವುದಾದರೆ ನೀನು ಜುಂಜಪ್ಪ ಎಂಬ ದೇವರಾಗಿ ಪೂಜೆ ಪುನಸ್ಕಾರವನ್ನು ಮಾಡಿಸಿಕೊಳ್ಳುತ್ತೀಯ ಎಂದು ಪಾರ್ವತಿ ಹೇಳುತ್ತಾಳೆ.

ಹೀಗೆ ಸಿನ್ನಮ್ಮ ಪಾರ್ವತಿ ಪರಮೇಶ್ವರರಿಂದ ಮಕ್ಕಳ ಭಾಗ್ಯ ಪಡೆದು ಗರ್ಭಿಣಿಯಾಗುತ್ತಾಳೆ.

ನವಮಾಸೊಂಬತ್ತು ತಿಂಗಳು
ತುಂಬಿತ್ತು ಸಿನ್ನಮ್ಮನಿಗೆ
ಒಂಬತ್ತು ತಿಂಗುಳಮ್ಮಾ

---

೧. ಬುಡಕಟ್ಟು ಮಹಾಕಾವ್ಯ ಜುಂಜಪ್ಪ – ಸಂ. ಚಲುವರಾಜು, ಪುಟ ೧೪೦.
೨. ಅದೇ, ಪುಟ ೧೪೦.

ಗುಡ್ಡದಂ ಬಸುರಿಯಾದಳೂ
ಸಿನ್ನಮ್ಮಗಳಿಗಾಗೊ॥[೧]

ಜುಂಜಪ್ಪನು ಸಿನ್ನಮ್ಮನ ಬೆನ್ನಿನಿಂದ ಹುಟ್ಟುತ್ತಾನೆ. ಅವನು ಹುಟ್ಟುವಾಗ ತಾಯಿಯ ಗರ್ಭದಲ್ಲೇ ಮಾತನಾಡುತ್ತಾನೆ. ನಾನು ಊರಿನ ಒಳಗೆ ಹುಟ್ಟುವುದಿಲ್ಲ. ಕಳುವಾರಳ್ಳಿ ಮೂಡಲು ದಿನ್ನೆಯಲ್ಲಿ ಬಿದಿರಿನ ದಬ್ಬೆಯಿಂದ ಎರಡು ಗುಡಿಸಲನ್ನು ಕಟ್ಟು ಮೂಡುಗಡೆಗೊಂದು, ಪಡುಗಡೆಗೊಂದು ಕಟ್ಟು ಎನ್ನುತ್ತಾನೆ. ಗುಡಿಸಲಲ್ಲೆ ಜನನವಾಗುತ್ತೀನಿ ಎಂದು ಹೇಳುತ್ತಾನೆ. ಕಾಡುಗೊಲ್ಲರು ಇದೇ ಸಂಪ್ರದಾಯವನ್ನು ಕೂಡ ಇಂದಿಗೂ ಅನುಸರಿಸುತ್ತಾರೆ. ಬಾಣಂತಿಯರನ್ನು ಗುಡಿಸಲಲ್ಲಿ ಊರಿನ ಹೊರಗಡೆ ಇಡುವ ಪದ್ಧತಿ ಇಂದಿಗೂ ಕಂಡುಬರುತ್ತದೆ.

**ಹೆಣ್ಣುಮಕ್ಕಳು ಹೆತ್ತಾಗ ಮತ್ತು ಋತುಮತಿಯಾದಾಗ ಮಾಡುವ ವಿಧಿವಿಧಾನ**

ಹಿಂದಿನಕಾಲದಲ್ಲಿ ಸಿತ್ತದೇವ್ರು, ಕಾಟನದೇವ್ರು ಅಂತ ಇದ್ದರು. ಅವರು ಈಶ್ವರನಿಗೆ ಹುಟ್ಟಿದವರು. ಈವಾಗ ಸಿತ್ತದೇವ್ರುಗೂ ಇಲ್ಲಿ ಕಾಟದೇವ್ರುಗೂ ಸೂತ್ಕ ಇಲ್ಲ. ಸ್ನಾನಮಾಡಿ ಈಬೂತಿ ಹಚ್ಚಿದರೆ ಸೂತಕ ಕಳೆದಂಗೆ ಈ ಜುಂಜಪ್ಪ ತಾಯಿ ಗರ್ಭದಲ್ಲಿ ಹುಟ್ಟುವಂತೆ ಹುಟ್ಟುವುದಿಲ್ಲ. ಅವನು ಪಾರ್ವತಿಯ ಗರ್ಭದಲ್ಲಿಯೂ ಅವ್ನು ಹುಟ್ಟುವುದಿಲ್ಲ. ದಕ್ಷನನ್ನು ಕೊಲ್ಲುವುದಕ್ಕಾಗಿ ಈಶ್ವರನ ಜಡೆಯಲ್ಲಿ ಹುಟ್ಟುತ್ತಾನೆ. ಆ ಜಡೆಯಲ್ಲಿ ಹುಟ್ಟಿದ ವೀರಭದ್ರನನ್ನು ತಂದು ಸಿನ್ನಮ್ಮನ ಹೊಟ್ಟೆಗೆ ಹಾಕಾಕೆ ಹೋದಾಗ, ಆ ಸಿನ್ನಮ್ಮ ಗರ್ಭದಲ್ಲಿ ಹುಟ್ಟಿದರೆ ಸೂತಕವಾಗುತ್ತದೆ ಮತ್ತು ಬಾಯಿಯಲ್ಲಿ ಹುಟ್ಟಿದರೆ ಎಂಜಲು ಆಗುತ್ತದೆ ಎಂದು ಎಡಗಡೆ ಭುಜದಲ್ಲಿ, ಬೆನ್ನಿನಲ್ಲಿ ಹುಟ್ಟಿದನು. ನಾನು ಊರಿನಲ್ಲಿ ಜನಿಸುವುದಿಲ್ಲ. ಊರಾಚೆ ಎರಡು ಬಿದಿರಿನಿಂದ ಗುಡಿಸಲನ್ನು ಕಟ್ಟಬೇಕು ಎಂದು ಹೇಳಿದಾಗ ಅದೇ ರೀತಿ ಪೂರ್ವದಿಕ್ಕಿಗೊಂದು, ಪಶ್ಚಿಮದಿಕ್ಕಿಗೊಂದು ಕಟ್ಟುತ್ತಾರೆ. ಅದರ ಸುತ್ತ ಕವಳೆ ಮುಳ್ಳು, ಕಾರೆಮುಳ್ಳು, ಜಾಲಿಮುಳ್ಳು ಕಡಿದು ಬೇಲಿ ಹಾಕುತ್ತಾರೆ. ಸೋಮವಾರದಿನ ಜುಂಜಪ್ಪ ಹುಟ್ಟಿದನು. ನಂತರ ಮಾರಣ್ಣ, ಮೈಲಣ್ಣ ಎಂಬ ತಮ್ಮಂದಿರು ಹುಟ್ಟುತ್ತಾರೆ.

ಈ ರೀತಿಯಿಂದ ಗೊಲ್ಲರ ಕುಲಕೆಲ್ಲಾ ಸೂತಕವಾಗುತ್ತದೆ. ೩ ತಿಂಗಳವರೆಗೂ ಯಾರು ಮುಟ್ಟುವಂತಿಲ್ಲ. ೩ ತಿಂಗಳಾದ ಮೇಲೆ ಜನಿಗೆ ಅಂದರೆ ಕುರಿ ಅಥವಾ ಹಸುವಿನ ಹಾಲನ್ನು ಮಗುವಿಗೆ ಕುಡಿಸುತ್ತಾರೆ. ಅದುವರೆಗೂ ಅವರು ಊರಿನ ಒಳಗಡೆಗೆ ಬರುವಂತಿಲ್ಲ, ಅದೇ ಪದ್ಧತಿ ಇಂದಿಗೂ ಕೂಡ ಕಾಡುಗೊಲ್ಲರ

---

೧. ಬುಡಕಟ್ಟು ಮಹಾಕಾವ್ಯ ಜುಂಜಪ್ಪ – ಸಂ. ಚಲುವರಾಜು, ಪುಟ ೧೫೦.

ಸಂಪ್ರದಾಯದಲ್ಲಿದೆ. ಮತ್ತೆ ಊರಿನ ಅಂಚಿನಲ್ಲೆ ಗುಡಿಸಲು ಕಟ್ಟಿ ಪ್ರತಿ ಕಾಡುಗೊಲ್ಲರ ಬಾಣಂತಿಯನ್ನು ಇರಿಸುವ ಪದ್ಧತಿ ಇಂದಿಗೂ ಇದೆ. ಮಡಿವಾಳ ಹೆಂಗಸರು ಅವರ ಬಟ್ಟೆಯನ್ನು ಒಗೆದು ಸ್ನಾನಮಾಡಿಸಿ ಹೋಗುತ್ತಾರೆ. ಈ ರೀತಿಯ ಸಂಪ್ರದಾಯ ಇವತ್ತಿಗೂ ಪ್ರಸ್ತುತವಾಗಿದೆ ಕಾಡುಗೊಲ್ಲರಲ್ಲಿ. ಹೆಣ್ಣುಮಕ್ಕಳು ಋತುಮತಿ ಆದಾಗ, ಅದು ಜುಂಜಪ್ಪನ ತಂಗಿ ಮಾರಕ್ಕ ಎಂಬುವಳು ಚಿಕ್ಕವಳಾಗಿರುತ್ತಾಳೆ, ಅವಳು ಋತುಮತಿಯಾದಾಗ, ಜುಂಜಪ್ಪನೇ ಹೇಳುತ್ತಾನೆ. ನಮ್ಮ ಸೂತಕ ನಮಗೆ ಆಗುವುದಿಲ್ಲ. ನಾನಿರುವಲ್ಲಿ ಸೂತಕ ಆಗಕೂಡದು. ಕರೇಕಳ್ಳೆಯಿಂದ ಒಳ್ಗೆ ನೀನು ಈ ಮಾರಕ್ಕನನ್ನು ಊರಿಂದ ಆಚೆ ಕರೆದುಕೊಂಡು ಹೋಗು. ಅಲ್ಲೆ ಗುಡಿಸಲು ಹಾಕು, ಆ ಗುಡಿಸಿಲಿನಲ್ಲಿ ೧೪ ದಿನಗಳವರೆಗೂ ಇದ್ದು ಮಣೆ, ಹಾಸಿಗೆ ಎಲ್ಲವನ್ನು ಅಲ್ಲೆ ಹಾಕುಬಿಡು, ೧೪ ದಿನಗಳು ಕಳೆದ ಮೇಲೆ ಬೆಂಕಿಯನ್ನು ತುಳಸಿ, ಅಳ್ಳೆ ಎಲೆಯಲ್ಲಿ ಅವಳ ನಾಲಿಗೆ ಸುಟ್ಟು ಸೂತಕ ಕಳೆದುಕೊಂಡು ಒಳ್ಗೆ ಕರೆದುಕೊಳ್ಳಿ ಎಂದು ಜುಂಜಪ್ಪ ಹೇಳುತ್ತಾನೆ.

ಕಾಡುಗೊಲ್ಲರು ಈಗಲೂ ಅವರು ಹೆಣ್ಣುಮಕ್ಕಳು ಋತುಮತಿಯಾದಾಗ ಇದೆ ಪದ್ಧತಿಯನ್ನು ಅನುಸರಿಸುತ್ತಾರೆ. ೧೪ ದಿನ ಬೇರೆ ಗುಡಿಸಿಲಿನಲ್ಲಿ ಇಡುವ ಪದ್ಧತಿ ಇಂದಿಗೂ ಅನುಸರಿಸುತ್ತಾರೆ. ಅರಳಿ ಎಲೆಯಿಂದ ನಾಲಿಗೆ ಸುಡುತ್ತಾರೆ, ನೆಲವನ್ನು ಸಾರಿಸಿ ಕೆಂಡ ಸುರಿದು ಹೆಣ್ಣುಮಗಳಿಂದ ಅದನ್ನು ತುಳಿಸುತ್ತಾರೆ. ಬೆಂಕಿಮ್ಯಾಲೆ ನಡೆದರೆ ಸೂತಕ ಕಳೆಯಿತು ಎಂಬುದು ಕಾಡುಗೊಲ್ಲರ ಒಂದು ನಂಬಿಕೆ ಇದೆ.

ತಿಂಗಳು, ತಿಂಗಳು ಋತುಮತಿ ಆದವರಿಗೆ ಊರಿಂದ ಆಚೆ ಒಂದು ಮಂಟಪ ಕಟ್ಟಿರುತ್ತಾರೆ. ಇಲ್ಲ ಅಂದ್ರೆ ಮರದಡಿಯಲ್ಲಿ ವಾಸಮಾಡುತ್ತಾರೆ. ೩ ದಿನ ಊರಿಂದಾಚೆ ಇರಬೇಕು. ನಂತರ ಸ್ನಾನಮಾಡಿ ಒಂದು ಜಾಗ ಬಿಟ್ಟು ಇನ್ನೊಂದು ಜಾಗಕ್ಕೆ ಹೋಗುವ ಪದ್ಧತಿ ಇದೆ. ನಾಲ್ಕನೆ ದಿನ ನೀರಾಕಂಡು ಇಬ್ಬನಿಯಲ್ಲಿ ನೆನೆಯುತ್ತಾರೆ. ೫ ರಾತ್ರಿ ಇಬ್ಬನಿ ಒಳಗೆ ನೆನೆಯಬೇಕು. ನಂತರ ಸ್ನಾನಮಾಡಿ, ಎಳೆಕರುವಿನ ಗಂಜಳವನ್ನು ಹಾಕಿಕೊಂಡು ಸ್ನಾನಮಾಡಿಕೊಳ್ಳಬೇಕು. ಇದರಿಂದ ಪಾಪನಾಶ ಎಂಬ ನಂಬಿಕೆ ಕಾಡುಗೊಲ್ಲರಲ್ಲಿದೆ.

**ಪಿರಿಯಾಪಟ್ಟಣ ಕಾಳಗದಲ್ಲಿರುವ ಕೌಟುಂಬಿಕ ವಿಚಾರಗಳು**

**ಕಥಾಸಾರ**

ಜನಪದ ಕಾವ್ಯಗಳು ಇತಿಹಾಸದ ಘಟನೆಗಳನ್ನು ತಲೆಮಾರಿಂದ ತಲೆಮಾರಿಗೆ ಸಾಗಿಸುವ ಮಾಧ್ಯಮಗಳಾಗಿವೆ. ಇವುಗಳಲ್ಲಿರುವ ಇತಿಹಾಸವನ್ನು ಕಟ್ಟುಕಥೆ ಎಂದು

ಭಾವಿಸಿದಲ್ಲಿ ಇತಿಹಾಸಕ್ಕೆ ನಷ್ಟವಾಗುತ್ತದೆ. ಇಲ್ಲಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸಕ್ಕೂ ನಷ್ಟವೆನಿಸುತ್ತದೆ. ಕಂಠಸ್ಥ ಸಂಪ್ರದಾಯದಲ್ಲಿ ಉಳಿದುಬಂದಿರುವ ಜನಪದ ವೀರಕಾವ್ಯಗಳಲ್ಲಿ 'ಪಿರಿಯಾಪಟ್ಟಣದ ಕಾಳಗ' ಒಂದು ವೀರಮಹಾಕಾವ್ಯವಾಗಿ ತನ್ನ ವಿಶಿಷ್ಟತೆಯನ್ನು ಮೆರೆದಿದೆ.

"ಪಿರಿಯಾಪಟ್ಟಣದ ಕದನಕ್ಕೆ ಕಾರಣ ಶ್ರೀರಂಗಪಟ್ಟಣದ ನರಸರಾಜನಿಗೆ ಪಿರಿಯಾಪಟ್ಟಣದ ವೀರರಾಜ ಕಪ್ಪಕೊಡಲು ನಿರಾಕರಿಸಿದ್ದೇ ಕಾರಣ ಎಂಬ ಐತಿಹಾಸಿಕ ಸತ್ಯವನ್ನು ತಿಳಿಸಿದ್ದಾರೆ"[೧] ಪಿರಿಯಾಪಟ್ಟಣದ ಕಾಳಗದಲ್ಲಿ ೩ ಕವಲುಗಳನ್ನು ಗುರುತಿಸುತ್ತಾರೆ. ವೀರರಾಜನು ತನ್ನ ಮಗಳನ್ನು ಮದುವೆಯಾಗಲು ಹೊರಟಿರುವುದು ಒಂದು ಕವಲಾಗುತ್ತದೆ. ಇದೇ ಮೂಲ ಕಾರಣವಾಗಿದೆ. ನಿಂಗರಾಜಮ್ಮನ ಕಥೆಯು ಕೂಡ ಈ ಕಾಳಗಕ್ಕೆ ಕಾರಣವಾಗಿದೆ. ಮತ್ತೆ ಎರಡು ಉಪಕವಲುಗಳಾಗಿ ಈ ಕಾವ್ಯ ಒಡೆದುಕೊಂಡಿದೆ. ಅದೇಂದರೆ ನಿಂಗರಾಜಮ್ಮ ವೀರರಾಜನ ತಂಗಿ, ದಳವಾಯಿಯ ಹೆಂಡತಿ ಇನ್ನೊಂದರಲ್ಲಿ ದಳವಾಯಿಯ ತಂಗಿ ವೀರರಾಜನ ಹೆಂಡತಿ. ಈ ಎರಡು ಕವಲುಗಳಲ್ಲಿ ಅಣ್ಣನಲ್ಲಿ ಪಾಲು ಕೇಳಲು ಹೋಗಿ ಮಾತಿಗೆ ಮಾತು ಬೆಳೆದು ಅಣ್ಣತಂಗಿಯರಲ್ಲಿ ಉಂಟಾಗುವ ವಿರಸವೇ ಈ ಕಾಳಗಕ್ಕೆ ಕಾರಣವಾಗಿದೆ. ಇಲ್ಲಿ ಮೂಲಕಾರಣ ಈ ಕಥೆಗೆ ವೀರರಾಜನ ಮಗಳನ್ನು ಪುಟ್ಟರಾಜ ಅರಸು ದಳವಾಯಿ ಕರೆದುಕೊಂಡು ಹೋಗುವುದೇ ಪಿರಿಯಾಪಟ್ಟಣ ಕಾಳಗಕ್ಕೆ ಕಾರಣವಾಗಿದೆ. ಇದರಿಂದ ತಂದೆ-ಮಗಳ ಸಂಬಂಧದಿಂದಲೇ ಈ ಕಾವ್ಯ ಮುಕ್ತಾಯವಾಗುತ್ತದೆ. ವೀರರಾಜನ ಮರಣದಲ್ಲಿ ಅಂತ್ಯವಾಗುತ್ತದೆ, ಪಿರಿಯಪಟ್ಟಣ ಹಾಳಾಗುತ್ತದೆ.

**ವೀರರಾಜನ ರಾಜಮನೆತನ**

ವೀರರಾಜ ಹೆಸರಿಗೆ ತಕ್ಕಂತೆ ವೀರರಾಜ, ಅವನು ಶೂರ ಪರಾಕ್ರಮಿ ಸುಂದರವಾದ ವ್ಯಕ್ತಿ ಸದಾಮಂದಹಾಸಬೀರುವ ವ್ಯಕ್ತಿ ಬೆಡಗಿನಂತ ಪಿರಿಯಾಪಟ್ಟಣಕ್ಕೆ ದೊರೆಯಂತೆ. ಕೆಂಪಾದ ಕಣ್ಣು, ಕ್ವಾರೆ ಮೀಸೆಯುಳ್ಳ ವ್ಯಕ್ತಿಯಾಗಿದ್ದನಂತೆ. ಅವನಿಗೆ ಅತ್ಯಂತ ಬಲ ಇತ್ತು ಎಂಬುದಕ್ಕೆ ಜನಪದರು ಹೇಳುವಂತೆ. "ಅವ್ನ - ಸಂದುಸಂದುಗೊಂದಾನೆ ಬಲವಂತೆ ನಲವತ್ತೆಂಟು ಸಂದ್ಗು ನಲವತ್ತೆಂಟು ಆನೆ ಬಲವಂತೆ"[೨] ಮರದ ಮಂಚ ಅವನ ತೂಕವನ್ನು ತಡೆಯುವುದಿಲ್ಲವೆಂದು ಕಡೆದು ಮಾಡಿದು ಕಲ್ಲಿನ ಮಂಚವಂತೆ. ಪಿರಿಯಾಪಟ್ಟಣದ ಹೆಸರನ್ನು ಹೇಳಿದರೆ ದಿಲ್ಲಿ, ಮದರಾಸುಗಳೇ ನಡುಗುತ್ತಿತ್ತಂತೆ.

---

೧. ಪಿರಿಯಾಪಟ್ಟಣ ಕಾಳಗ - ಪಿ.ಕೆ.ರಾಜಶೇಖರ - ಪುಟ ೧೧ (ಕೃತಿ ಸಮೀಕ್ಷೆ)

೨. ಪಿರಿಯಾಪಟ್ಟಣ ಕಾಳಗ - ಪಿ.ಕೆ.ರಾಜಶೇಖರ - ಪುಟ ೫ (ಪದ್ಯ ೨೬)

ಇವನ್ನು ಅತ್ಯಂತ ವೈಭವದಿಂದ ಮೆರೆಯುತ್ತಿದ್ದನು ೨೪ ಜಿಲ್ಲೆಗೂ ಈ ರಾಜನೇ ದೊರೆಯಾಗಿದ್ದನು. ಪಿರಿಯಾಪಟ್ಟಣಕ್ಕೆ ಕಂಚಿನ ಕೋಟೆ ಮೂರು ಸುತ್ತು, ಕಲ್ಲಿನಕೋಟೆ ಮೂರು ಸುತ್ತಂತೆ ಏಳುಸುತ್ತು ಕೋಟೆ ಕಟ್ಟಿ ಮೆರೆಯುತ್ತಿದ್ದನು. ಪಿರಿಯಾಪಟ್ಟಣಕ್ಕೆ ನಾಲ್ಕು ದಿಕ್ಕಿಗೂ ನಾಲ್ಕು ಬಾಗಿಲುಗಳಿದ್ದವಂತೆ, ಇವನಿಗೆ ಕೊಂಗು, ಕೊಡಗು ಬಡಗುಜಿಲ್ಲೆಯಿಂದ ಆದಾಯ ಬರುತ್ತಿತ್ತಂತೆ. ಆರುಸಾವಿರ ಎಕರೆ ಅಡಿಕೆ ತೋಟ, ಹತ್ತುಸಾವಿರ ಎಕರೆ ಬತ್ತದ ತೋಟ, ಏಳುಸಾವಿರ ಯಾಲಕ್ಕಿ ತೋಟವಿತ್ತಂತೆ, ಹಲವಾರು ಊರುಗಳನ್ನು ಕಟ್ಟಿಸುತ್ತಾನೆ. ರತ್ನ, ಮುತ್ತು ಚಿನ್ನದ ಕೊಪ್ಪರಿಕೆಗಳು ಬೇಕಾದ ಸಕಲ ಸಂಪತ್ತನ್ನು ಹೊಂದಿದ್ದ ಗಂಡು ಭೂಮಿಯ ಗಂಡ ವೀರರಾಜ ಬಲುಪ್ರೀತಿಪಟ್ಟು ಪಿರಿಯಾಪಟ್ಟಣವನ್ನು ಕಟ್ಟಿಸಿದನು.

ಈತನ ವ್ಯಾಪ್ತಿಗೆ ಹಲವಾರು ಊರುಗಳು ಸೇರಿದ್ದವೆಂದು ತಿಳಿದುಬರುತ್ತದೆ. ಅವುಗಳೆಂದರೆ ಹನ್ಸೋಗೆ, ಕಿತ್ತೂರು, ಮುತ್ತೂರು, ಬೆಟ್ಟದಪುರ, ಬೂನಳ್ಳಿ, ಬ್ವಾಗಳ್ಳಿ, ಮೆಲ್ಲಳ್ಳಿ, ಚಿಲ್ಕುಂದ ಹೀಗೆ ಹಲವಾರು ಊರುಗಳನ್ನು ಕಟ್ಟಿಸಿ ವೀರನಂತೆ ಮೆರೆಯುತ್ತಿರುತ್ತಾನೆ.

ಇವನ ರಾಜ್ಯದಲ್ಲಿ ೬ ಸಾವಿರ ಆನೆ ದಂಡು, ಹತ್ತು ಸಾವಿರ ಕತ್ತಿದಂಡಿನವರು, ೩ ಸಾವಿರ ಒಂಟೆಗಳು, ಕುದ್ರೆದಂಡು ೧೬ ಸಾವಿರ ಇದ್ದವೆಂದು, ೪೦ ಸಾವಿರ ಸಿಪಾಯಿಗಳು, ಜೂಲುನಾಯಿ ಹಿಡಿದ ಗೊಲ್ಲರು ಮೂರುವರ್ಷದ ಬಾಲಕರು ಪಿರಿಯಾಪಟ್ಟಣದಲ್ಲಿ ಕೈಯಲ್ಲಿ ಬಾಣ ಹಿಡಿದು ಮರಿನಾಗರಹಾವಿನಂತೆ ಇದ್ದರು ಎಂಬ ವರ್ಣನೆ ಆ ಗಂಡುಭೂಮಿಯ ಶೌರ್ಯವನ್ನು ತಿಳಿಯಲು ಸಹಾಯಕವಾಗಿದೆ.

ಪಿರಿಯಾಪಟ್ಟಣದ ೪ ದಿಕ್ಕುಗಳಲ್ಲಿ ೪ ದೇವತೆಗಳು ವಾಸವಾಗಿರುವುದನ್ನು ಕಾಣುತ್ತೇವೆ. ಆರು ಅಂಕಣದ ಕಲ್ಲು ಮಂಚದಲ್ಲಿ ಜಾಗ ಸಾಲದೆ ಒಂದೇ ಮಗ್ಗುಲಲ್ಲಿ ೩ ಜನ ಮಡದಿಯರನ್ನು ಹೊಂದಿದ್ದು ಅತ್ಯಂತ ವೈಭವದಿಂದ, ಸುಖಜೀವನವನ್ನು ನಡೆಸುತ್ತಾ ರಾಜ್ಯವಾಳುತ್ತಿದ್ದನು. ೩ ಜನ ಹೆಂಡತಿಯರು ಯಾರೆಂದರೆ ಮೈಸೂರಿನ ಕೆಂಪೇ ಅರಸರ ಮಗಳಾದ ಪಟ್ಟದಮಲ್ಲಮ್ಮ, ಬೆಟ್ಟದ ತುಂಗದ ದೊಡ್ಡರಸರ ಮಗಳಾದ ಕೆಂಪಗೌರಮ್ಮ ಮಹಾರಾಜರಿಗೆ ಇವಳೇ ಸಂಪತ್ತಾಗಿದ್ದಳೆಂದು ಮತ್ತು ಮಲೆಯಾಳದ ಚೆನ್ನಮಲ್ಲಮ್ಮ ಎಂಬುವಳು ಹೀಗೆ ಮೂವರು ಹೆಂಡತಿಯರ ಜೊತೆ ಬಾಳ್ವೆಯನ್ನು ನಡೆಸುತ್ತಾ ರಾಜ ಪಗಡೆ ಆಟವನ್ನು ಆಡುತ್ತಿದ್ದನು.

ವೀರರಾಜನ ರಾಜವೈಭವ ಎಷ್ಟಿತ್ತೆಂಬುದು ಇದರಿಂದ ತಿಳಿದುಬರುತ್ತದೆ. ಅವನು ಅತ್ಯಂತ ಪರಾಕ್ರಮಿ ಎಂಬುದು ತಿಳಿಯುತ್ತದೆ. ತನ್ನ ಕುಟುಂಬವ್ಯವಸ್ಥೆಯನ್ನು

ಹೀಗೆ ಹೊಂದಿದ್ದನೆಂದು ತಿಳಿದುಬರುತ್ತದೆ. ಆತನ ಸಂಪತ್ತು, ಸೈನ್ಯಬಲ ಎಷ್ಟಿತ್ತು ಎಂಬುದು ತಿಳಿಯಬಹುದಾಗಿದೆ.

**ಪಟ್ಟದ ಮಲ್ಲಮ್ಮ ತನ್ನ ತವರಿಗೆ ನಾಮಕರಣಕ್ಕೆ ಹೋಗುವುದು**

ವೀರಾಜನ ಒಡಹುಟ್ಟಿದ ತಂಗಿಯಾದ ನಿಂಗ್ರಾಜಮ್ಮನನ್ನು ಮೈಸೂರು ರಾಜ್ಯದ ದಳವಾಯಿಗೆ ಕೊಟ್ಟು ಮದುವೆ ಮಾಡುತ್ತಾರೆ. ವೀರಾಜರ ತಂದೆ-ತಾಯಿ ಇದ್ದ ಕಾಲದಲ್ಲೇ ಮದುವೆ ಮಾಡುತ್ತಾರೆ. ಆದರೆ ವೀರಾಜ ಎಂದೂ ಮೈಸೂರಿಗೆ ಬರುವುದಿಲ್ಲ. ಏಕೆಂದರೆ ಪಿರಿಯಾಪಟ್ಟಣ ಗಂಡುಭೂಮಿ ಎಂಬ ಕಲ್ಪನೆ ಅವನದು.

ಗಂಡು ನನ್ನ ಪಿರಿಯಾಪಟ್ಟಣ
ಮೈಸೂರಾದರೆ
ಹೆಸರಿಗೊಂದು ಹೆಣ್ಣು ರಾಜ್ಯವಲ್ಲೋ॥[೧]

ಹೀಗೆ ಅಹಂಕಾರದಿಂದ ಹೇಳುತ್ತಾನೆ. ವೀರರಾಜನಿಗೆ ೩ ಜನ ಮಡದಿಯರಿದ್ದರು ಮಕ್ಕಳಿರಲಿಲ್ಲ. ಮೈಸೂರು ರಾಜ್ಯಕ್ಕೆ ಮದುವೆಯಾಗಿರುವ ನಿಂಗ್ರಾಜಮ್ಮನಿಗೆ ಒಂದು ಗಂಡು ಮಗು ಹುಟ್ಟುತ್ತದೆ. ಆ ಮಗುವಿಗೆ ಒಂಭತ್ತು ದಿವಸಕ್ಕೆ ಹೆಸರುಕಟ್ಟೋಶಾಸ್ತ್ರ (ನಾಮಕರಣ) ಮಾಡುತ್ತಾರೆ. ಪಿರಿಯಾಪಟ್ಟಣಕ್ಕೆ ದಳವಾಯಿ ಓಲೆಯನ್ನು ಬರೆದು ಭಾವನನ್ನು ತಪ್ಪದೆ ಬರಬೇಕೆನ್ನುತ್ತಾರೆ. ಪಟ್ಟದಮಲ್ಲಮ ದಳವಾಯಿಯ ತಂಗಿ ವೀರರಾಜನಿಗೆ ಈ ಪತ್ರದ ವಿಷಯವನ್ನು ತಿಳಿಸುತ್ತಾಳೆ. ಇದರಿಂದ ವೀರರಾಜ ನಾನು ಬರುವುದಿಲ್ಲವೆಂದಾಗ ಅವಳಿಗೆ ದುಃಖ ಉಂಟಾಗುತ್ತದೆ. ಪಟ್ಟದ ಮಲ್ಲಮ್ಮ ಹೋಗಿ ಬರುವಂತೆ ವೀರರಾಜನನ್ನು ಕೇಳಿದಾಗ ಅವನಿಗೆ ಕೋಪಬರುತ್ತದೆ. ಈ ಕೆಳಗಿನ ಮಾತನ್ನು ನುಡಿಯುತ್ತಾನೆ.

ಸತ್ಯದೊಳಗೆ ನನ್ಗೆ ಭಾವನಿರಬಹುದು
ಮೈಸೂರ್ ದಳವಾಯ್
ಶಕ್ತಿವೊಳುಗೆ ನನ್ನೇನು ಮಾಡಲಾರ[೨]

ಎಂದು ಕಟುವಾದ ಮಾತುಗಳನ್ನು ನುಡಿಯುತ್ತಾನೆ. ನನ್ನ ರಾಜ್ಯಬಿಟ್ಟು ನಾ ಯಾರ ಮನೆಗೂ ಬರುವುದಿಲ್ಲ ಎಂದು ನುಡಿಯುತ್ತಾನೆ. ಪಟ್ಟದ ಮಲ್ಲಮ್ಮನಿಗೆ ಎಲ್ಲಿಲ್ಲದ ದುಃಖ ಬರುತ್ತದೆ. ನನ್ನ ಅಣ್ಣನ ಮಗುವಿನ ಮುಖನೋಡಿ ಮುದ್ದಾಡಿ ಬರುತ್ತೇನೆ ಎಂದು ಸೆರಗೊಡ್ಡಿ ಬೇಡಿಕೊಳ್ಳುತ್ತಾಳೆ.

---

೧. ಪಿರಿಯಾಪಟ್ಟಣ ಕಾಳಗ – ಪಿ.ಕೆ.ರಾಜಶೇಖರ – ಪುಟ ೧೧ (ಕೃತಿ ಸಮೀಕ್ಷೆ)

೨. ಅದೇ,

ಹೆಣ್ಣೇ ತಂದೆ-ತಾಯಿಗಳು ಇದ್ದರೆ ಮಾತ್ರ ತವರು, ತಂದೆ ಇದ್ದರೆ ಬಂಧುಬಳಗವು ಎಂದು ಹೇಳುತ್ತಾನೆ. ಅಣ್ಣತಮ್ಮಂದಿರು ಯಾರು ಯಾರಿಗೂ ಆಗುವುದಿಲ್ಲ ಎಂಬ ಮಾತನ್ನು ಹೇಳುತ್ತಾನೆ. ಇದರಿಂದ ದುಃಖಿತಳಾಗಿ ಅವಳು ನಿಂಗ್ರಾಜಮ್ಮನನ್ನು ಜನಗಳಿಂದ ಆಡಿಕೊಳ್ಳುವಂತೆ ಮಾಡಬೇಡಿ ಎಂದು ಬೇಡಿ-ಕೊಳ್ಳುತ್ತಾಳೆ. ಇದರಿಂದ ಮಡದಿ ಪಟ್ಟದ ಮಲ್ಲಮ್ಮನಿಗೆ ನೀನು ಮೈಸೂರಿಗೆ ಹೋಗಿ ಬಾ ಎಂದು ಅಪ್ಪಣೆ ಕೊಡುತ್ತಾನೆ.

ಈ ಸಂತೋಷದ ಸುದ್ಧಿಯನ್ನು ಕೇಳಿ ಪಟ್ಟದ ಮಲ್ಲಮ್ಮ ರಾತ್ರಿಯೆಲ್ಲಾ ನಿದ್ರೆ ಬರದೆ, ಕೋಳಿ ಕೂಗುವ ಹೊತ್ತಿಗೆ ಎದ್ದು ಸ್ನಾನಮಾಡಿ ಮೈಸೂರಿಗೆ ಪ್ರಯಾಣ ಬೆಳೆಸುತ್ತಾರೆ. ದಾದಿಯರು ಬಂದು ಪಟ್ಟದ ಮಲ್ಲಮ್ಮನಿಗೆ ಶೃಂಗಾರ ಮಾಡುತ್ತಾರೆ. ಹೇಗೆ ಶೃಂಗಾರವಾದರು ಎಂಬುದಕ್ಕೆ ಜನಪದರು ಹೇಳುವ ಪದ್ಯ ಅತ್ಯಂತ ಸೊಗಸಾಗಿದೆ.

"ಬಂಗಾರದೊಡುವ್ವಾ ಮೈಗೆ ಧರುಸುದ್ರು
ಪಟ್ಟದಮ್ಮಯ್ಯ
ಮುತ್ತಿನ ಪದಕ ಕತ್ತಿಗೆ ಧರಿಸಿದ್ರು"[೧]

ಹೀಗೆ ಶೃಂಗಾರಗೊಂಡು ಪಟ್ಟದಮಲ್ಲಮ್ಮ ತವರು ಮನೆಗೆ ಕುದುರೆ ಸಾರೋಟಿನಲ್ಲಿ, ದಾದಿಯರಿಗೆಲ್ಲಾ ಕೈಯತ್ತಿ ಮುಗಿದು ಹೋಗುತ್ತಾರೆ. ಫಿರಂಗಿಯಿಂದ ಗುಂಡುಗಳನ್ನು ಹಾರಿಸುತ್ತಾರೆ.

ಸಾಲಾಗಿ ನಿಂತು ಆಕಾಶ ಬಿರಿಯಾಂಗೆ
ಅಮ್ಮಯ್ಯನವುರ್ಗೆ
ಜೈಕಾರ ಹಾಕಿ ಕಳುಹಿಸಿಕೊಟ್ಟರು

ಹೀಗೆ ಪಟ್ಟದ ಮಲ್ಲಮ್ಮ ತನ್ನ ತವರು ಮನೆಯಾದ ಮೈಸೂರು ರಾಜ್ಯಕ್ಕೆ ಹೊರಟು-ಬಂದರು.

**ನಿಂಗ್ರಾಜಮ್ಮ ಪಟ್ಟದ ಮಲ್ಲಮ್ಮನನ್ನು ಬಂಜೆ ಎಂದು ಹೀಯ್ಯಾಳಿಸುವುದು**

ಹನ್ನೆರಡು ವರ್ಷದಿಂದಲೂ ಅಣ್ಣಯ್ಯ ನೀನು ತಂಗಿಯನ್ನು ನೋಡುವುದಕ್ಕೆ ಬರಲಿಲ್ಲ. ೧೨ ವರ್ಷ ತುಂಬಿದ ಮ್ಯಾಲೆ ಅಣ್ಣನ ಮುಖ ನೋಡಬಾರದು ಎಂಬುದು ಹಿರಿಯರ ನಂಬಿಕೆಯಂತೆ. ಇನ್ನು ೩ ದಿನ ಕಳೆದರೆ ೧೨ ವರ್ಷವಾಗುತ್ತದೆ ಎಂದು

೧. ಪಿರಿಯಾಪಟ್ಟಣ ಕಾಳಗ – ಪಿ.ಕೆ.ರಾಜಶೇಖರ – ಪುಟ ೧೪

ಪಟ್ಟದಮಲ್ಲಮ್ಮ ಹೇಳಿದಳು. ಅದಕ್ಕೆ ದಳವಾಯಿ ಅಣ್ಣ ನಿನ್ನನ್ನು ಮೊದಲು ನೋಡುವುದಕ್ಕೆ ಬಂದೆ ಎಂದು ಹೇಳುತ್ತಾ ಕಣ್ಣಿನಲ್ಲಿ ಕಣ್ಣೀರ ತುಂಬಿಕೊಳ್ಳುತ್ತಾಳೆ.

ಇವಳು ಮಹಾಜ್ಞಾನಿ ನನ್ನ ತಂಗಿ ಎಂದು ದಳವಾಯಿ ದೊಡ್ಡರಸು ಮರುಳಾದರು. ದಳವಾಯಿ ಸ್ವಾಮಿಯ ಮಡದೀರು ಬಂದು ಪಟ್ಟದಮಲ್ಲಮ್ಮನನ್ನು ಬಾಚಿ ತಬ್ಬಿಕೊಳ್ಳುತ್ತಾರೆ. ನಿಂಗ್ರಾಜಮ್ಮ ನೀವೊಬ್ಬರೆ ಬಂದೀರಲ್ಲ ಅಣ್ಣ ಬರಲಿಲ್ಲವೇ ಎಂದು ಕೇಳುತ್ತಾಳೆ. ನಿನಗಾದರು ನಮ್ಮನ್ನು ನೋಡಲು ಕರುಣೆ ಬಂತಲ್ಲ ಎಂದು ಹೇಳಿದಾಗ, ಪಟ್ಟದ ಮಲ್ಲಮ್ಮ ನಿನಗೆ ಅಣ್ಣನ ಮೇಲೆ ಪ್ರೀತಿ ಇದ್ದರೆ ನಿಂಗ್ರಾಜಿ ನೀನು ಬರಬಹುದಿತ್ತು. ಈಕೆಯ ಮಾತನ್ನು ಕೇಳಿದ ತಕ್ಷಣ ಎಳೆಯ ನಿಂಗ್ರಾಜಮ್ಮ ಕೋಪ ಮಾಡಿಕೊಳ್ಳುತ್ತಾಳೆ. ಇದರಿಂದ ಪಟ್ಟದ ಮಲ್ಲಮ್ಮನಿಗೆ ದುಃಖ ಬರುತ್ತದೆ. ಬೇಸರವಾಗುತ್ತಾಳೆ. ಇದನ್ನು ನೋಡಿದ ದೊಡ್ಡರಸು ಯಾಕೆ ತಂಗಿ ಎಂದು ಕೇಳಿದಾಗ ಅವಳು ಈ ಮಾತನ್ನು ಹೇಳುತ್ತಾಳೆ.

"ಬಂಜೆ ಅನ್ನುವ ಮಾತ ನೆನುಕೊಂಡು
ನನ್ನ ಅಣ್ಣಯ್ಯ
ದುಕ್ಕ ಒತ್ತುರ್‍ಸಿ ಕಣ್ಣೀರು ಬಂದಾವೋ"[೧]

ಅಲ್ಲಿಂದ ೧೨ ಅಂಕಣದ ಹಜಾರಕ್ಕೆ ಪಟ್ಟದ ಮಲ್ಲಮ್ಮ ಬರುತ್ತಾಳೆ. ಅಲ್ಲಿ ಬಂಗಾರದ ತೊಟ್ಟಿಲಲ್ಲಿ ಬಾಲಕನನ್ನು ನೋಡಿ, ಮಗುವನ್ನು ಎತ್ತಿಕೊಳ್ಳಲು ಬಂದಾಗ ಈ ಕೆಳಗಿನಂತೆ ಹೇಳುತ್ತಾರೆ.

"ಪಟ್ಟದ ಮಲ್ಲಮ್ಮನವರು
ತೊಟ್ಟಿಲಲ್ಲಿ ಇದ್ದಂಥ
ತನ್ನ ಅಣ್ಣ ಅತಿಗೇರ ಕಂದ ಬಂಗಾರ ಗೊಂಬೆಯನ್ನು
ಎತ್ತಿ ಎದೆಗವುಚಿ ಕೆನ್ನೆ ಕಚ್ಚಿ ಮುದ್ದಾಡಬೇಕೆಂಬುದಾಗಿ
ತೊಟ್ಟಿಲಿಗೆ ಕೈ ಬಾಚಿದಾ ಕ್ಷಣದಲ್ಲಿ"[೨]

ಅಷ್ಟರಲ್ಲಿ ಬಿರ ಬಿರನೆ ನಿಂಗ್ರಾಜಮ್ಮ ಬಂದು ತೊಟ್ಟಿಲಿನಲ್ಲಿ ಕಂದನನ್ನು ಬೇಗನೆ ತಬ್ಬಿಕೊಳ್ಳುತ್ತಾಳೆ. ಪಟ್ಟದ ಮಲ್ಲಮ್ಮನನ್ನು ಬೈಯ್ಯುತ್ತಾಳೆ. ಅತ್ತಿಗೆಯಮ್ಮ ಬಂಜೆ ಎನ್ನುವ ಭಯವೂ ಇಲ್ಲದೆ ಮಗುವನ್ನು ಮುಟ್ಟಿ ಮುದ್ದಾಡಬಹುದೆ? ಬಂಜೆ ಮುಟ್ಟಿದ ಮಕ್ಕಳು ಹಾಳಾಗುತ್ತವೆ, ಬಂಜೆ ಸೇರಿದ ಮನೆಯು ಹಾಳಾಗುತ್ತದೆ, ಪೂರ್ವಿಕರು ಹೇಳಿದಂತಹ

---

೧. ಪಿರಿಯಾಪಟ್ಟಣ ಕಾಳಗ – ಪಿ.ಕೆ.ರಾಜಶೇಖರ – ಪುಟ ೨೫.

೨. ಪಿರಿಯಾಪಟ್ಟಣ ಕಾಳಗ, ಪಿ.ಕೆ.ರಾಜಶೇಖರ, ಪುಟ ೨೬

ಮಾತು ತಿಳಿದುಕೋ ಎಂದು ಹೇಳುತ್ತಾಳೆ. ಇದರಿಂದ ಪಟ್ಟದ ಮಲ್ಲಮ್ಮ ತನ್ನ ತಮ್ಮ ಪುಟ್ಟರಸನ ಮನೆಗೆ ಬರುತ್ತಾಳೆ. ದುಃಖದಿಂದ ಕೂಡಿದ ಮಲ್ಲಮ್ಮನನ್ನು ನೋಡಿ ವಿಚಾರಿಸಿದಾಗ ನನಗೆ ಮಕ್ಕಳಿಲ್ಲವಲ್ಲ ಎಂಬುದಾಗಿ ಹೇಳುತ್ತಾಳೆ.

ಈ ರೀತಿಯಾಗಿ ನಿಂಗರಾಜಮ್ಮ ಪಟ್ಟದ ಮಲ್ಲಮ್ಮನನ್ನು ಬಂಜೆ ಎಂದು ಹೀಯ್ಯಾಳಿಸುತ್ತಾಳೆ.

**ಚಾಮಾಯಿಯ ಹುಟ್ಟಿನ ಪ್ರಸಂಗ**

ಪಟ್ಟದಮಲ್ಲಮ್ಮ ಚಾಮುಂಡಿಯನ್ನು ಬೇಡಿ ವರ ಪಡೆದು ಗರ್ಭಿಣಿಯಾಗುತ್ತಾಳೆ. ಅವಳಿಗೆ ನವಮಾಸ ತುಂಬುತ್ತದೆ. ಸೂರ್ಯಗ್ರಹಣ ಹಿಡಿದ ಕಾಲದಲ್ಲಿ ಭಾನುವಾರ ಅಮಾವಾಸೆಯ, ಮಧ್ಯಾಹ್ನದ ರಾಹುಕಾಲದಲ್ಲಿ ಕೆಟ್ಟ ಕಾಲದಲ್ಲಿ ಪಟ್ಟದಮಲ್ಲಮ್ಮನಿಗೆ ಹೆಣ್ಣು ಮಗು ಜನಿಸಿತು. ಪಂಚಾಂಗವನ್ನು ನೋಡಿದಾಗ ಜೋಯಿಸರು ಈ ಮಗುವಿನ ನಕ್ಷತ್ರ ನೋಡಿ, ಈ ರಾಜನಿಗೆ ಈ ರೀತಿ ಹೇಳುತ್ತಾರೆ.

"ನಿನ್ನ-ಹೊಟ್ಟೆ ಒಳಗೆ ಹೆಣ್ಣು ಹುಟ್ಟಲಾಗಿ
ಈರಾಜದೊರೆಯ
ನಿನ್ನ ಕ್ವಾಟೆಗೆ ಕಷ್ಟ ನಷ್ಟಾವು ಬಂದೀದೆ!"[೧]

ಇದರಿಂದ ಬೇಸರಗೊಂಡ ರಾಜ ಒಂದು ಕ್ಷಣವು ಈ ಮಗುವನ್ನು ಕೋಟೆಯಲ್ಲಿ ಇರಲು ಬಿಡುವುದಿಲ್ಲ. ಈ ಹೆಣ್ಣು ಹುಟ್ಟಿದ ೧೨ ವರ್ಷಕ್ಕೆ ಪಿರಿಯಾಪಟ್ಟಣ ಹಾಳಾಗುತ್ತದೆ. ಕೆಟ್ಟಗಳಿಗೆಯಲ್ಲಿ ಹುಟ್ಟಿದ ಹೆಣ್ಣನ್ನು ಇಟ್ಟುಕೊಳ್ಳಬಾರದೆಂದು ಈ ಮಗುವನ್ನು ಸಮುದ್ರಕ್ಕೆ, ನದಿಗೆ ಎಸೆಯಿರಿ ಎಂದು ಹೇಳಿದನು.

ಪಟ್ಟದಮಲ್ಲಮ್ಮ ಇನ್ನೂ ಮೂರ್ಛೆಯಲ್ಲಿರುವಾಗ ಹರಿಯಾಲುಪುರದ ಹೊನ್ನರ್ಸರ ಈ ರಾಜ ಕರೆದು, ನಾನು ಬೇಟೆಗೆ ಹೋಗುತ್ತೀನಿ ನೀವು ಈ ಮಗುವನ್ನು ನದಿಗೆ ಎಸೆಯಿರಿ ಎನ್ನುತ್ತಾನೆ. ಹೀಗೆ ಚಾಮಾಯಿಯು ಕೆಟ್ಟ ಗಳಿಗೆಯಲ್ಲಿ ಹುಟ್ಟಿದ ಕಾರಣವೇ ಮುಂದೆ ನಡೆಯುವ ಈ ಪಿರಿಯಾ ಪಟ್ಟಣ ಕಾಳಗ ನಡೆಯಿತು ಎಂಬುದು ಇತಿಹಾಸವಾಗಿ ಉಳಿದಿದೆ.

ಇದರಿಂದ ಪಟ್ಟದಮಲ್ಲಮ್ಮನಿಗೆ ಈ ಮಾತನ್ನು ಹರಿಯಾಲಪುರದ ಅರಸನ ಮಂತ್ರಿ ತಿಳಿಸುತ್ತಾನೆ. ಇದರಿಂದ ಬೇಸರಗೊಂಡ ತಾಯಿ ಚಾಮುಂಡಿ ವರದಿಂದ ಹುಟ್ಟಿದ ಮಗಳು ಈಕೆ. ನನ್ನ ಎದೆಯ ಹಾಲನ್ನು ಕುಡಿಸಿ ಬೆಳೆಸಬೇಕು. ಚಾಮುಂಡಿ ಹೆಸರನ್ನೇ ಇಡಬೇಕು ಎಂದು ಈ ರೀತಿ ಅವರನ್ನು ಬೇಡಿಕೊಳ್ಳುತ್ತಾಳೆ.

೧. ಪಿರಿಯಾಪಟ್ಟಣ ಕಾಳಗ, ಪಿ.ಕೆ.ರಾಜಶೇಖರ, ಪುಟ – ೨೨.

"ಹರಿಯಾಲುಪುರದ ಹೊನ್ನೇಅರಸರೆ
ನನಗೆ ನನ್ನ ಅಣ್ಣ ಬ್ಯಾರೆಯಲ್ಲ ನೀವು ಬ್ಯಾರೆಯಲ್ಲ
ನನ್ನ ಗಂಡ ಈರಾಜು ದ್ರುಷ್ಟು ದೊರೆ ಕಾಣಪ್ಪ
ಅವನು ಹೇಳಿದಂಗೆ ಮಾಡಿದಿದ್ದರೆ

ನನ್ನ ತಲೆಯೂ ಉಳಿಯೋ ಹಂಗಿಲ್ಲ
ನಿನ್ನ ತಲೆಯೂ ಉಳಿಯೋ ಹಂಗಿಲ್ಲ
ನನ್ನ ಹೊಟ್ಟೇಲಿ ಹುಟ್ಟಿದ ಈ ಕಂದಮ್ಮ
ನನ್ನ ಎದೆಹಾಲನ್ನೇ ಕುಡಿಯಬೇಕು."[೧]

ಈ ರೀತಿಯಾಗಿ ಹೇಳಿ ಅವನನ್ನು ಬೇಡಿಕೊಂಡಾಗ ಹೊನ್ನೇ ಅರಸ ಯಾರಿಗೂ ತಿಳಿಯದ ಹಾಗೆ ಸುರಂಗ ಮಾರ್ಗವನ್ನು ಮಾಡಿಸಿದರು. ೬ ಸಾವಿರ ಕಲ್ಲು ಒಡ್ಡರನ್ನು ಕರೆಯಿಸಿ ನೆಲಮಾಳಿಗೆಯನ್ನು ಮಾಡಿಸಿದರು. ಆ ಸುರಂಗ ಮಾರ್ಗದಲ್ಲಿ ಮಗಳನ್ನು ಸಾಕುತ್ತಾರೆ. ಏಳು ಜನ ದಾದಿಯರನ್ನು ಅವಳನ್ನು ನೋಡಿಕೊಳ್ಳಲು ಇಟ್ಟಿದ್ದರು. ಈ ರೀತಿ ಚಾಮಾಯಿಯ ಹುಟ್ಟು ಅತ್ಯಂತ ದುರಂತದಲ್ಲಿ ಆಗುತ್ತದೆ. ಆ ಮಗುವಿನ ಬೆಳವಣಿಗೆ ಈ ಸುರಂಗದಲ್ಲೆ ನಡೆಯುತ್ತದೆ.

**ವೀರರಾಜ ತನ್ನ ಮಗಳು ಚಾಮಾಯಿಯನ್ನು ಇಷ್ಟಪಡುವುದು**

ಕನ್ಯೆ ಚಾಮಾಯಿ ೧೨ ವರ್ಷದವಳಾಗಿ ಬೆಳೆದಾಗ ಅವಳು ಒಂದು ದಿನ ಋತುಮತಿಯಾಗುತ್ತಾಳೆ. ಚಾಮಾಯಿ ತಾಯಿಗೆ ಹೇಳಿದಾಗ ತಾಯಿಯು ಮಡಿವಾಳ ಸೆಟ್ಟಿಯನ್ನು ಕರೆಯಿಸಿ, ಆ ಬಟ್ಟೆಯನ್ನು ತೆಗೆದುಕೊಂಡು ಹೋಗಿ ನೀರಲ್ಲಿ ಹಾಕು, ಯಾರಿಗೂ ಈ ಗುಟ್ಟನ್ನು ಹೇಳಬೇಡ ಎಂದು ಹೇಳುತ್ತಾಳೆ. ಬೇಗ ಬಟ್ಟೆಯನ್ನು ತೆಗೆದುಕೊಂಡು ಹೋಗು ಎಂದಾಗ ಅವನು ಅದೇ ರೀತಿ ಮಾಡುತ್ತಾನೆ. ಅರಸನಕೆರೆ ಕೋಡಿಗೆ ಬಂದು, ಆ ಬಟ್ಟೆ ತೊಳೆದು ಒಣಗಿಹಾಕಿರುತ್ತಾನೆ.

ಈ ಕಡೆ ವೀರರಾಜ ಮಧುವನಕ್ಕೆ ಹೋಗಿ ಸ್ನಾನ ಮಾಡಿ ಪೂಜೆ ತಪಗಳನ್ನು ಮಾಡುತ್ತಾನೆ. ಮೊದಲು ಉರಿಮಸಣ್ಣಮ್ಮನಿಗೆ ಪೂಜೆ ಮಾಡುತ್ತಾರೆ. ಮುಕ್ಕೋಟಿ ದೇವರನ್ನೆಲ್ಲಾ ನೆನೆಯುತ್ತಾರೆ. ಆದರೆ ಶನಿದೇವರನ್ನು ಮಾತ್ರ ಮರೆಯುತ್ತಾರೆ. ಮೇಲೆ ರಥದಲ್ಲಿ ಹೋಗುತ್ತಿದ್ದ ಶನಿದೇವರು ಎಲ್ಲ ದೇವರ ಪೂಜೆ ಮಾಡಿ ನನ್ನನ್ನೇ ಮರೆತನಲ್ಲಾ ಎಂದು ಕೋಪಿಸಿಕೊಂಡು ತಾರೆ ಮರದ ಅಡಿಯಲ್ಲಿ ನಿಂತುಕೊಳ್ಳುತ್ತಾರೆ. ಕೋಪಿಸಿಕೊಂಡ ಶನಿದೇವರು ನಿನ್ನ ರಾಶಿಗೆ ನಾನು ಬಂದು ನಿನ್ನನ್ನು ಹಾಳು–

೧. ಪಿರಿಯಾಪಟ್ಟಣ ಕಾಳಗ, ಪಿ.ಕೆ.ರಾಜಶೇಖರ, ಪುಟ – ೩೫.

ಮಾಡುತ್ತೇನೆಂದು ಭಾವಿಸಿ ಕನ್ಯಾರಾಶಿಗೆ ಬಂದಾಗ ವೀರರಾಜನಿಗೆ ಕಣ್ಣುಗಳು ಮಂಜಾಗುತ್ತವೆ. ಎಡಗಣ್ಣು, ಎಡಭುಜ ಹಾರುತ್ತದೆ, ಅರಮನೆಯಲ್ಲಿ ಊಟ ಮಾಡಲು ಹೋದಾಗ ಊಟ ಸೇರುವುದಿಲ್ಲ.

ಈ ಕಡೆ ಶನಿದೇವರು ಮಾಯಾದ ಕುದುರೆಯನ್ನು ಮಾಡಿಕೊಂಡು ಮುಸ್ಲಿಂ ವೇಷದಲ್ಲಿ ಪಂಚವರ್ಣದ ಕುದುರೆಯನ್ನು ತರುತ್ತಾರೆ. ಇದನ್ನು ನೋಡಿ ವೀರರಾಜನಿಗೆ ಆಸೆಯಾಗಿ ಕುದುರೆಯನ್ನು ತೆಗೆದುಕೊಳ್ಳುತ್ತಾನೆ. ಆ ಕುದುರೆ ಏರಿ ೩ ಏಟು ಹೊಡೆದಾಗ, ಆ ಕುದುರೆ ಆಕಾಶ ಮಾರ್ಗದಲ್ಲಿ ಚಲಿಸುತ್ತದೆ. ಅಡವಿ, ಅರಣ್ಯಕ್ಕೆ ಬಂದು ರಾಜನನ್ನು ಕೆಳಕ್ಕೆ ಕೆಡವುತ್ತದೆ.

ಮೂರ್ಛೆ ಹೋದ ವೀರರಾಜನಿಗೆ ಶನಿದೇವರು ಹಂಸ ಪಕ್ಷಿಯ ರೂಪದಲ್ಲಿ ಬಂದು ಅರಸನ ಕೆರೆಯ ಕೋಡಿಯಲ್ಲಿ ಒಣಗಿ ಹಾಕಿದ್ದ ಬಟ್ಟೆಯನ್ನು ಕೊಕ್ಕಿನಲ್ಲಿ ತಂದು ವೀರರಾಜನ ಮೇಲೆ ಬೀಸಾಡುತ್ತದೆ. ಇದರಿಂದ ವೀರರಾಜನಿಗೆ ಆ ಸೀರೆಯನ್ನು ಹಾಕಿಕೊಂಡಿದ್ದ ಹುಡುಗಿಯ ಮೇಲೆ ಆಸೆ ಉಂಟಾಗುತ್ತದೆ.

ಮಡುವಾಳಸೆಟ್ಟಿಯ ಹತ್ತಿರಕ್ಕೆ ಬಂದ ವೀರರಾಜನು ಈ ಸೀರೆ ಯಾರದೆಂದು ಕೇಳುತ್ತಾನೆ. ಅವನು ನನಗೆ ಗೊತ್ತಿಲ್ಲ ಎಂದಾಗ, ವೀರರಾಜ ಆ ಸಈರೆ ಉಟ್ಟ ಬಾಲೆಯ ವರ್ಣನೆ ಮಾಡುತ್ತಾನೆ.

"ಪಟ್ಟೆ ಸೀರೆಯೆ ಇಷ್ಟು ಚಂದುವಲ್ಲೊ
ಮಡುವಾಳಸೆಟ್ಟಿ
ಆದ–ಉಟ್ಟ–ಬಾಲೆ ಇನ್ನೆಷ್ಟು ಚಂದವೊ!"

ಆ ಸೀರೆಯನ್ನು ಉಟ್ಟಿದ್ದವಳನ್ನು ನಾನು ಮದುವೆ ಆಗುತ್ತೀನಿ ಎಂದು ವೀರರಾಜ ಹೇಳುತ್ತಾನೆ. ಮಡಿವಾಳನನ್ನು ಹೆದರಿಸಿ ಇದು ಯಾರ ಸೀರೆ ಎಂದು ತಿಳಿಯಬೇಕೆಂದು ಎಂದು ಹೇಳುತ್ತಾನೆ. ಇದರಿಂದ ಮಡುವಾಳಸೆಟ್ಟಿ ಬೀದಿ ಬೀದಿಯಲ್ಲಿ ಸಾರುತ್ತಾನೆ. ಯಾರು ಹೇಳುವುದಿಲ್ಲ. ಕೋಟೆಯ ಬಾಗಿಲಿಗೆ ಬಂದಾಗ ಪಟ್ಟದ ಮಲ್ಲಮ್ಮ ಇದು ನನ್ನ ಮಗಳದೆಂದು ತಿಳಿದು, ಮಡಿವಾಳ ಸೆಟ್ಟಿಯನ್ನು ನಿಂದಿಸಿ ಆ ಸೀರೆಯನ್ನು ಅರಮನೆಗೆ ಎಸೆಯುತ್ತಾಳೆ. ಇದರಿಂದ ವೀರರಾಜನಿಗೆ ಈ ಸೀರೆ ಚಾಮಾಯಿಯದೆಂದು ತಿಳಿದು ಅವಳನ್ನು ಇಷ್ಟಪಡುತ್ತಾನೆ. ಇದರಿಂದ ಪಟ್ಟದಮಲ್ಲಮ್ಮ ನಾನು ಹೆತ್ತ ಮಗಳಲ್ಲವೆ ಎಂದು ಬೇಡಿಕೊಳ್ಳುತ್ತಾಳೆ ಆದರೂ ಆತ ಕೇಳುವುದಿಲ್ಲ.

"ನಾನು ಬೆಳೆದಂಥ ದಾನ್ಯವ
ಪಟ್ಟದರಾಣಿ
ನಾನೇಯ ಊಟ ಮಾಡುತೀನಿ

ಮಗಳೆ ಆಗಲಿ ಮಡದಿ ಆಗಲಿ
(ಈ ಸೀರೆಯೊಳ)
ಬೇಗನೆ ಮಂಚಕೆ ಕರೆದು ತಾರ್ಣೆಣ್ಣೆ!"[೧]

ಈ ರೀತಿಯಾಗಿ ವೀರರಾಜು ಹೇಳಿದಾಗ ಅವಳಿಗೆ ದುಃಖ ಇಮ್ಮಡಿಸುತ್ತದೆ. ನಂತರ ಅರಮನೆಗೆ ಬಂದು ಓಲೆಯನ್ನು ಮೈಸೂರಿನ ರಾಜನಾದ ಪುಟ್ಟರಸನಿಗೆ ಬರೆಯುತ್ತಾಳೆ. ನೀನು ಬೇಗ ಬಂದು ನನ್ನ ಮಗಳನ್ನು ಮದುವೆಯಾಗು ಎಂಬುದಾಗಿ ತಿಳಿಸುತ್ತಾಳೆ.

"ನಾಳೆ ಮಧ್ಯಾಹ್ನ ಹನ್ನೆರ್ಡು ಗಂಟೆಗೆ
ನನ್ನ ತಮ್ಮನ ಭಾವ
ಹೊಟ್ಟೆಲುಟ್ಟಿದ ಮಗಳ ಮದುವೆ ಆಗುತ್ತಾರೆ"[೨]

ಎಂಬುದಾಗಿ ತಿಳಿಸಿದಾಗ ಈರಾಜನಿಗೆ ಎಲ್ಲಾ ರಾಜರು ಬಂದು ಬುದ್ಧಿವಾದ ಹೇಳಿದರು ಕೇಳುವುದಿಲ್ಲ. ಕೊನೆಗೆ ರಾತ್ರಿ ೧೨ ಗಂಟೆ ವೇಳೆಯಲ್ಲಿ ಪುಟ್ಟರಸು ಬಂದು ಚಾಮಾಯಿಯನ್ನು ಕರೆದುಕೊಂಡು ಹೋಗುತ್ತಾನೆ.

**ವೀರರಾಜನ ಮರಣ ಮತ್ತು ಹೆಂಡತಿಯರನ್ನು ಕೊಲ್ಲುವುದು**

ಅಖಂಡ ಸ್ವಾಭಿಮಾನಿಯಾದ ವೀರರಾಜನು, ತನಗಾಗಿ ತನ್ನ ತವರೂರಿಗಾಗಲಿ ಯಾವುದೇ ರೀತಿಯ ಅವಮಾನವಾಗುವುದನ್ನು ಸಹಿಸುವುದಿಲ್ಲ. ಅವನು ಬಲಗೈಯಲ್ಲಿ ರಣವಜ್ರ ಕತ್ತಿಯನ್ನು ಹಿಡಿದು, ಎಡಗೈಲಿ ಭಾರಿ ಗುರಾಣಿ ಹಿಡಿದು ಪಟ್ಟದ ಕುದುರೆ ಏರಿ, ಮೈಸೂರು ರಾಜ್ಯದ ಸೈನ್ಯದ ಗುಂಪಿಗೆ ನುಗ್ಗುತ್ತಾರೆ. ಮುಂಗಾರು ಗುಡುಗಿನಂತೆ ನುಗ್ಗುತ್ತಾನೆ. ವೀರರಾಜ, ಸಿಡಿಲಿನಂತೆ ಎರಗಿ ಯುದ್ಧ ಮಾಡುತ್ತಿರುತ್ತಾರೆ. ತೆಂಕಲು ಪುರಕ್ಕೆ ೩ ಜನ ಪಟ್ಟದ ರಾಣಿಯರು ಈ ಯುದ್ಧವನ್ನು ನೋಡಲು ಬರುತ್ತಾರೆ. ಅವರು ಯುದ್ಧದಲ್ಲಿ ಸೋಲುವುದು ಖಚಿತ ಎಂದು ಗೊತ್ತಾದ ತಕ್ಷಣ ವೀರರಾಜ ತನ್ನ ಹೆಂಡತಿ-ಮಕ್ಕಳನ್ನು ನೆನೆದು ಕತ್ತಿಯನ್ನು ಓರೆಗೆ ಹಾಕಿಕೊಂಡು ಪಿರಿಯಾಪಟ್ಟಣ ಕೋಟೆಗೆ ಬರುತ್ತಾನೆ.

ವೀರರಾಜನನ್ನು ನೋಡಿದ ಮಡದಿಯರು ಈ ಕಾಳಗ ಬೇಡ ಎಂದು ಹೇಳುತ್ತಾರೆ ಮತ್ತು ಈ ಪಿರಿಯಾಪಟ್ಟಣ ಮೈಸೂರು ರಾಜ್ಯಕ್ಕೆ ಸೇರಿಕೊಳ್ಳಲಿ ಎಂದು ಹೇಳುತ್ತಾರೆ. ಈ ರಾಜನ ಬಿಳಿಯ ಉಡುಪು ರಕ್ತದ ಕಲೆಯಂತಿತ್ತು ಮತ್ತು ಕೈಯಲ್ಲಿ ರಣವಜ್ರ ಕತ್ತಿ ಅಂಟಿದಂಗಿತ್ತು ಅದನ್ನು ಪಟ್ಟದಮಲ್ಲಮ್ಮ ಕಿತ್ತು, ಮಂಚದಲ್ಲಿ

೧. ಪಿರಿಯಾಪಟ್ಟಣ ಕಾಳಗ, ಪಿ.ಕೆ.ರಾಜಶೇಖರ, ಪುಟ ೪೯.
೨. ಅದೇ, ಪುಟ ೪೯.

ವಿಶ್ರಾಂತಿಸಲು ಹೋದಾಗ ಮೂರ್ಛೆ ಹೋಗುತ್ತಾನೆ. ನಿನ್ನ ರಾಜ್ಯ ಹೋದರು ಸರಿ ನಮ್ಮ ಮುತ್ತೈದೆತನ ಶಾಶ್ವತವಾಗಿರಲಿ ಎಂದು ಪಟ್ಟದಮಲ್ಲಮ್ಮ ಹೇಳುತ್ತಾಳೆ. ಸಾವಿರ ವರುಷ ಬದುಕಿದರು ಸಾವು ತಪ್ಪಿದ್ದಲ್ಲ. ಆದ್ದರಿಂದ ನಾನು ಯುದ್ಧ ಮಾಡುತ್ತೇನೆ ಎಂದು ಮಡದಿಯನ್ನು ನಿಮ್ಮ ತವರು ಮನೆಗೆ ಹೋಗಿ ಎಂದು ಹೇಳುವಾಗ ಈ ಕೆಳಗಿನ ಮಾತನ್ನು ಹೇಳುತ್ತಾನೆ.

"ರಕ್ತ ನನಗೆ ಕಾದು ಬಂದೈತೆ
ನನ್ನ ಮಡ್ಡೀರೆ
ಸಾಯಬ್ಯಾಡಿ ನೀವು ಬಾಳ ಹೋಗಿರೆ!"[೧]

ಎಂದು ವೀರರಾಜ ದೊರೆ ಹೆಂಡತಿಯರಿಗೆ ಹೇಳಿದಾಗ ಪಟ್ಟದ ಮಲ್ಲಮ್ಮ ನಾವುಸತ್ತರೂ ತವರಿಗೆ ಹೋಗುವುದಿಲ್ಲ. ತವರಲ್ಲಿ ಅಣ್ಣ ಅತ್ತಿಗೆಯರ ಕಟಕಿ ಮಾತುಗಳನ್ನು ಕೇಳಲಾರೆವು ಎಂದಾಗ. ಬೇರೆಯ ದಾರಿಯೇ ಇಲ್ಲದೆ ವೀರರಾಜ ಮೊದಲಿಗೆ ಪಟ್ಟದ ಮಲ್ಲಮ್ಮನನ್ನು ಚಂದ್ರಗತ್ತಿಯಿಂದ ಹಿರಿದು ರುಂಡ ಮುಂಡವನ್ನು ಬೇರ್ಪಡಿಸುತ್ತಾನೆ. ಒಬ್ಬ ಹೆಂಡತಿಯನ್ನು ಕೊಂದು ಈರಾಜ ಯೋಚಿಸುತ್ತಿರುತ್ತಾನೆ. ಇನ್ನಿಬ್ಬರು ಹೆಂಡತಿಯರಲ್ಲಿ ಒಬ್ಬ ಗರ್ಭಿಣಿ ಇನ್ನೊಬ್ಬ ಬಾಣಂತಿಯಾಗಿದ್ದಳು. ಕಂದ ಈರಣ್ಣನ ಮುಖವನ್ನು ನೋಡುತ್ತಾನೆ. ಆವಾಗ ಆ ಹೆಂಡತಿ ಹೇಳುವ ಮಾತು ಅತ್ಯಂತ ಸೊಗಸಾಗಿದೆ.

"ಹಸೀನ ಮುಂದೆ ಕರವ ಕೊಂಬ್ಯಾಡ
ನಮ್ಮಾ ದೊರೆಯೆ
ಕರುವಿನ ಮುಂದೆ ಹಸವ ಕೊಲ್ಲಯ್ಯ![೨]

ಹೀಗೆ ಹೇಳಿದಾಗ ನಿನ್ನ ಕೊಲ್ಲುವಾಗ ಮಗು ಬಂದರೆ ನನ್ನ ಕೈಯಲ್ಲಿ ಕತ್ತಿ ನಿಲ್ಲುವುದಿಲ್ಲ. ಮೊದಲು ಮಗು ಕೊಂದು ನಂತರ ನಿನ್ನ ಕೊಲ್ಲುತ್ತೇನೆ ಎನ್ನುತ್ತಾನೆ. ಹೀಗೆ ಕತ್ತಿಯಿಂದ ಮಗುವನ್ನು ಕತ್ತರಿಸುತ್ತಾನೆ. ಆಮೇಲೆ ಹೆಂಡತಿಯರಿಬ್ಬರ ರುಂಡ–ಮುಂಡಗಳನ್ನು ಬೇರ್ಪಡಿಸುತ್ತಾನೆ. ನಂತರ ಮೈಸೂರು ರಾಜ್ಯಕ್ಕೆ ಯುದ್ಧಕ್ಕೆ ಹೋಗಿ ಎಲ್ಲರನ್ನು ಸದೆ ಬಡಿಯುವ ಸಂದರ್ಭದಲ್ಲಿ ಮತ್ತೆ ತನ್ನ ತಮ್ಮ ಚಂದುರೆ ಅರಸು ತನ್ನ ಏಳು ಜನ

---

೧. ಪಿರಿಯಾಪಟ್ಟಣ ಕಾಳಗ, ಪಿ.ಕೆ.ರಾಜಶೇಖರ, ಪುಟ – ೨೯೮.
೨. ಅದೇ, ಪುಟ – ೨೯೮.

ಮಡದಿಯರನ್ನು ಒಂದೇ ಏಟಿಗೆ ಸಾಯಿಸುತ್ತೇನೆ ಎಂಬುದಾಗಿ ೭ ಜನರನ್ನು ಕೊಲ್ಲುತ್ತಾನೆ.

ನಂತರ ಚಂದುರೆ ಅರಸು ಮೈಸೂರು ದಳವಾಯಿಯಿಂದ ನಾಶವಾಗುತ್ತಾನೆ. ತನ್ನ ಪರಮವೈರಿ ದಳವಾಯಿಯನ್ನು ವೀರಾಜ ಗುಂಗ್ರಾಲು ಛತ್ರದಲ್ಲಿ ಎದುರಾಗುತ್ತಾನೆ. ಮೈಸೂರು ಸೈನ್ಯವನ್ನು ದಿಕ್ಕಾಪಾಲಾಗಿ ಮಾಡಿ ದಳವಾಯಿಗೆ ಮುಖಾಮುಖಿಯಾಗಿ ನಿಲ್ಲುತ್ತಾನೆ. ಇದರಿಂದ ಮೈಸೂರಿನಿಂದ ಬಂದ ಚಾಮಾಯಿ ವೀರರಾಜನ ಇರಿತದಿಂದ ದಳವಾಯಿಯನ್ನು ರಕ್ಷಿಸುತ್ತಾಳೆ. ಆದರೆ ತನ್ನ ತಂದೆಯ ಕುದುರೆ ಏರಿ ತಲೆಮರೆಸಿ-ಕೊಳ್ಳಲು ಹೋಗುತ್ತಾಳೆ. ಆದರೆ ವೀರರಾಜ ಬೆನ್ನಟ್ಟುತ್ತಾನೆ. ಅವನಿಂದ ಪಾರಾಗಲು ಚಾಮಾಯಿ ಕೆರೆಗೆ ಹಾರಿ ಪ್ರಾಣಬಿಡುತ್ತಾಳೆ. ಇದರಿಂದ ಮನನೊಂದ ವೀರರಾಜ ವೀರಾವೇಶದಿಂದ ಹೋರಾಡಿ ಪ್ರಾಣಬಿಡುತ್ತಾನೆ. ಪಿರಿಯಾಪಟ್ಟಣ ಮೈಸೂರು ರಾಜ್ಯಕ್ಕೆ ವಶವಾಗುತ್ತದೆ.

**ಚಿಕ್ಕದಣ್ಣಾಯಕ ಚೆನ್ನಬಸವಣ್ಣ ಕಾವ್ಯದಲ್ಲಿ ಕೌಟುಂಬಿಕ ಪರಿಕಲ್ಪನೆ**

**ಕಥಾಸಾರ**

ಚಿಕ್ಕದಣ್ಣಾಯಕನೆನಿಸಿದ ಚೆನ್ನ ಬಸವಣ್ಣನ ಹುಟ್ಟಿನ ಕಥೆಯು ಈ ನಾಡಿನಲ್ಲಿ ಮನೆಮಾತಾಗಿದೆ. ಬಸವಣ್ಣನವರಿಗೆ ಬಹಳ ಕಾಲ ಮಕ್ಕಳಿರಲಿಲ್ಲ. ಒಂದು ದಿನ 'ಕಲೆಯ ನಾರದನು' ಕಲ್ಯಾಣಮ್ಮ (ಬಸವಣ್ಣನ ಹೆಂಡತಿ ನೀಲಮ್ಮ)ನವರಿಗೆ ಮಕ್ಕಳ ಬಯಕೆಯನ್ನು ಹುಟ್ಟಿಸುವನು. ಕಲ್ಯಾಣಮ್ಮ ಮಠಕ್ಕೆ ಹೋಗಿ ಮಕ್ಕಳ ಬಯಕೆಯನ್ನು ಬಸವಣ್ಣನವರಲ್ಲಿ ತೋಡಿಕೊಳ್ಳುವಳು, ಎಷ್ಟು ಪರಿಪರಿಯಾಗಿ ಹೇಳಿದರು ಕೇಳುವುದಿಲ್ಲ. ಇವರು ತೀವ್ರತರವಾದ ಪರೀಕ್ಷೆಗಳನ್ನು ವೃತ್ತಗಳನ್ನು ಒಡ್ಡುವರು, ಕಡ್ಡಿ ಸಣ್ಣಕಾಯಿ ಜರಗು' ಭತ್ತವನ್ನು ಪುಟ್ಟರಾಜು ನಗಕೊಳಗದಲ್ಲಿ ಅಳೆದು ಸುರಿದು ಒಂದು ಕೊಳಗಕ್ಕೊಂದು ಕೊಳಗ ಅಕ್ಕಿ ರವೆ ಮಾಡಬೇಕೆನ್ನುವರು.

ಕಲ್ಯಾಣಮ್ಮ ಭತ್ತವನ್ನು ತೆಗೆದುಕೊಂಡು ಹೋಗಿ ೭ ವರ್ಷದ ಎಳೆಯವರಾದ ನಾಗಮ್ಮನವರ ಹತ್ತಿರ ಕೊಡುವರು. ಆಕೆ ಅದನ್ನು ಕುಟ್ಟಿ ಅಕ್ಕಿ ರವೆ ಮಾಡಿಕೊಡುವರು, ಕಲ್ಯಾಣಮ್ಮ ಅದನ್ನು ತೆಗೆದುಕೊಂಡು ಹೋಗಿ ಬಸವಣ್ಣನವರಿಗೆ ಕೊಟ್ಟಾಗ ಅವರು ಮತ್ತೊಂದು ಮಾತನ್ನು ಹೇಳುವರು. ನೀನು ಕಾವೇರಿ ನದಿಗೆ ಹೋಗಿ ಹಾವಿನ ಸಿಂಬಿಯನ್ನು ಮಡಿಸಿ, ಮರಳಿನಿಂದ ಮಾಡಿದ ಬಿಂದಿಗೆಯಲ್ಲಿ ನೀರನ್ನು ತಂದು ಒಂದು ಕೊಳಗ ಅಕ್ಕಿ ಹಾಕಿ ಒಂದು ಬದನೆಕಾಯಿಯಲ್ಲಿ ಸಾರುಮಾಡಬೇಕು. ನಂತರ ಲಕ್ಷದ ಮ್ಯಾಲೆ ತೊಂಬತ್ತಾರು ಸಾವಿರದ ಜನಗಳಿಗೆ ಊತಣವನ್ನು ನೀನು ನೀಡಬೇಕು. ಅಲ್ಲದೆ ಮಿಕ್ಕಿದ ಪ್ರಸಾದವನ್ನು ಕಲ್ಲುಬಂಡಿಯಲ್ಲಿ

ತುಂಬಿ ಕೈಲಾಸಕ್ಕೆ ಕಳುಹಿಸಬೇಕು. ಆಗ ನಾನು ಮಕ್ಕಳ ಪಂಚಾಂಗ ನೋಡುವೆನು ಎನ್ನುವರು.

ನಂತರ ಬಸವಣ್ಣನವರು ಕೈಲಾಸದಲ್ಲಿ ತ್ರಿಮೂರ್ತಿಗಳನ್ನು ಕೇಳುತ್ತಾನೆ. ಅವರು ಅನೇಕ ಪಂಚಾಂಗ ನೋಡಿ ಶರಣರ ಮನೆಯ ಪ್ರಸಾದಕ್ಕೆ ತಪಿಸಿದ್ದರೆ ಆಕೆಗೆ ಮಕ್ಕಳ ಫಲವುಂಟೆಂದು ತಿಳಿಸುತ್ತಾರೆ. ನಂತರ ಇವರು ಭೂಲೋಕಕ್ಕೆ ಬಂದು ಹರಳಯ್ಯ, ಕಕ್ಕಯ್ಯ, ಚೆನ್ನಯ್ಯರುಗಳ ಮನೆಯ ಪ್ರಸಾದವನ್ನು ಎರುವಿನ ಹಿಂಡಿನ ಕೈಲಿ ತರಿಸಿ ಅದನ್ನು ಗೂಡಿನಲ್ಲಿಟ್ಟು ತಮ್ಮ ಹೆಂಡತಿಗೆ ಹೇಳದೆ ಮಲಗಿ ನಿದ್ರಿಸುತ್ತಿರುವಾಗ ಗೂಡಿನಲ್ಲಿಟ್ಟಿರುತ್ತಾರೆ. ಪ್ರಸಾದ ಮಲ್ಲಿಗೆ ಮಾವಿನ ಹೂವಿನ ಘಮಘಮವಾಗಿ ಝುಂಕರಿಸುವಾಗ, ಬಾಲೆ ನಾಗಮ್ಮ ಅಣ್ಣಯ್ಯ ಶರಣರ ಮನೆಯ ಪ್ರಸಾದ ಸ್ವೀಕಾರ ಮಾಡಲು ಹೋಗಿ ನನಗೂ ಪ್ರಸಾದ ತಂದಿರಿಸಿರುವರು ಎಂದು ತಿಳಿದು ಭಕ್ತಿಭಾವದಿಂದ ಸ್ವೀಕರಿಸಿದಾಗ ಗುರುಮಠದ ಕಂಚಿನ ಕಹಳೆ ನುಡಿಯುತ್ತದೆ. ಅಂದಿನಿಂದ ಗುರುಮಠವನ್ನು ಬಿಜ್ಜಳನ ಆದೇಶದಂತೆ ಕೊಂಡಗದ ಮಂಚಯ್ಯ ಕಾಯುತ್ತಾನೆ. ಬಸವಣ್ಣನವರು ಎದ್ದುಬಂದು ತಂಗಿ ಮಾಡಿದ ಕೆಲಸವನ್ನು ತಿಳಿದು ಚಿಂತಿಸುತ್ತಾರೆ. ಇದರಿಂದ ಬಾಲೆ ನಾಗಮ್ಮ ಗರ್ಭಿಣಿಯಾಗುವಳು. ಅನಂತರ ಆಕೆಯನ್ನು ಪಂಚಾಯ್ತಿಗೆ ಕರೆಸುತ್ತಾರೆ. ಅಲ್ಲಿ ಆಕೆ ಅನೇಕ ಪವಾಡಗಳನ್ನು ತೋರಿಸುತ್ತಾಳೆ. ಆಕೆ ಬೆನ್ನುಭಾಗದಿಂದ ಮಗನನ್ನು ಹಡೆಯುತ್ತಾಳೆ. ಬಿಜ್ಜಳನ ಅರಮನೆ ಹಾಳಾಗುತ್ತದೆ. ನೀಲಮ್ಮ ಶರಣೆಯು ತಮ್ಮ ಅಳಿಯನನ್ನು ಹರಸಿ ತೊಟ್ಟಿಲುಕಟ್ಟಿ ಹಾಡುವರು. ಪಟ್ಟಣಿಗರೆಲ್ಲರೂ ಸಂತೋಷಗೊಳ್ಳುವರು.

**ನೀಲಮ್ಮನು ಮಕ್ಕಳ ಫಲ ಕೇಳುವುದು.**

ಬಸವಣ್ಣನವರ ಮಡದಿಯಾದ ನೀಲಮ್ಮ ಘನಶರಣೆಯಾಗಿದ್ದಳು. ಆದಿ ಕಲ್ಯಾಣ ಪಟ್ಟಣದಲ್ಲಿ ಹಸುಗೂಸುಗಳಿಗೆ ಹಾಲನ್ನು ಎರೆಯುತ್ತಿರುತ್ತಾಳೆ. ಅಲ್ಲಿಗೆ ಒಂದು ದಿನ ನಾರದ ಬಂದು ಕುಂದಾದ ನುಡಿಯನ್ನು ನುಡಿಯುತ್ತಾನೆ. ಆ ನುಡಿ ಹೇಗಿತ್ತೆಂದರೆ

ಹಾಲು ಎರದರೇನು ಅನ್ನ ಇಕ್ಕಿದರೇನು
ಹಾಲೆರೆದು ನಿಮಗೆ ಫಲವೇನು ಸುವ್ವಿ![೧]

ಈ ರೀತಿ ನುಡಿದು ಕಲ್ಯಾಣ ಪಟ್ಟಣಕ್ಕೆ ಸಲ್ಲುವ ಮಗನಿಲ್ಲಾ ಎಂದು ಹೇಳಿದಾಗ ನೀಲಮ್ಮನಿಗೆ ದುಃಖ ಬಂದು, ಬಸವಣ್ಣ ಇರುವ ಗುರುಮಠಕ್ಕೆ ಹೋಗುತ್ತಾಳೆ. ಅಲ್ಲಿ ಗಾಜಿನ ಕಂಬ ಸೇರಿ ಅಳುತ್ತಾಳೆ. ಇದನ್ನು ನೋಡಿದ ಬಸವಣ್ಣನವರು ನಿನ್ನ ಅಳಲಿಗೆ

೧. ಚಿಕ್ಕ ದಣ್ಣಾಯಕ – ಚೆನ್ನಬಸವಣ್ಣ – ಮಲೆಯೂರು ಗುರುಸ್ವಾಮಿ, ದೇವಯ್ಯ ಹರವೆ, ಪುಟ ೬.

ಕಾರಣವೇನು? ಎನ್ನುತ್ತಾರೆ. ನನ್ನ ತಂಗಿ ಏನಾದರೂ ಮುನಿಸಿಕೊಂಡಳೇ ಎಂಬುದಾಗಿ ಕೇಳುತ್ತಾರೆ. ನೀಲಮ್ಮ, ನಾರದ ಆಡಿದ ಕುಂದಾದ ಮಾತನ್ನು ತಿಳಿಸುತ್ತಾಳೆ. ಹುಚ್ಚು ಮಾತೀಗೆ ಏಕೆ ತಲೆಕೆಡಿಸಿಕೊಳ್ಳುತ್ತೀಯ. ಈ ಭೂಮಿಗಿಂತ ನಾನು ೭ ದಿನಕ್ಕೆ ದೊಡ್ಡವನು. ಅವಳು ಪಟ್ಟಣಕ್ಕೆ ಸಲ್ಲುವಾ ಮಗನಿಲ್ಲವಲ್ಲ ಎಂದು ಕೇಳುತ್ತಾಳೆ. ಅವರು ಅಲ್ಲಿರುವ ಶರಣರೆಲ್ಲರನ್ನೂ ತೋರಿಸುತ್ತಾರೆ. ಹೊಲಾರ ಹೊನ್ನಯ್ಯ, ಆದಿ ಹರುಳಯ್ಯಾ, ಮಾದಾರ ಚೆನ್ನಯ್ಯ, ಕುರುಬರ ಬೀರಯ್ಯ, ಮಡಿವಾಳ ಮಾಚಯ್ಯ, ಬೇಡರ ಕಣ್ಣಯ್ಯ ಇವರೆಲ್ಲಾ ಕೋಟಿಗೊಬ್ಬ ಶರಣರು ಎನ್ನುತ್ತಾರೆ.

ಮುನ್ನೂರು ಕೋಟಿ ಪ್ರಜೆಗಳು ಈ ಕಲ್ಯಾಣ ಪಟ್ಟಣದಲ್ಲಿದ್ದಾರೆ. ನೀನ್ಯಾಕೆ ಈ ರೀತಿ ಹೇಳುತ್ತೀಯ ಎಂದು ಬಸವಣ್ಣನು ಒಂದು ವ್ರತವನ್ನು ಅನುಸರಿಸುವಂತೆ ಅಲ್ಲಿದ್ದ 'ಕಡ್ಡಿಯ ಸಣ್ಣಕಾಯಿ ಬರಗು' ಭತ್ತವನ್ನು ಪುಟ್ಟರಾಜು ಎಂಬ ಕೊಳಗದಲ್ಲಿ ಅಳೆದು ಸುರಿದು ಅವಳನ್ನು ಪರೀಕ್ಷೆಗೆ ಒಡ್ಡುತ್ತಾರೆ. ಒಂದು ಕೊಳಗ ಅಕ್ಕಿಯಿಂದ ಒಂದು ಕೊಳಗ ಅಕ್ಕಿರವ ಮಾಡಿದರೆ ನಿನ್ನ ಸತ್ಯಕ್ಕೆ ಮೆಚ್ಚುತ್ತೇನೆ ಇದರಿಂದ ನಿನಗೆ ಮಕ್ಕಳ ಫಲವುಂಟೆಂದು ತಿಳಿಸುತ್ತಾರೆ.

"ಆದಿ ಕಲ್ಯಾಣಕೆ ಬಂದಾರು ನೀಲಮ್ಮ
ತಾಯಿ ನಾಗವ್ವನ ಕರೆದಾರು ಸುವ್ವಿ"[೧]

ಆಕೆ ಆದಿಕಲ್ಯಾಣಕ್ಕೆ ಬಂದು ತನ್ನ ನಾದಿನಿ ನಾಗಮ್ಮನನ್ನು ಕರೆದು ೭ ವರ್ಷದ ಬಾಲೆ ನಾಗಮ್ಮನಿಗೆ ತನ್ನ ಗಂಡನಾದ ಬಸವಣ್ಣ ಹೇಳಿದ ಮಾತನ್ನು ಹೇಳಿದಾಗ, ಚಿನ್ನದ ಒನಕೆಯನ್ನು ನಾಗಮ್ಮ ತೆಗೆದು, ಮುತ್ತಿನ ಒನಕೆಯನ್ನು ಹಿಡಿದು ಭತ್ತವನ್ನು ಕುಟ್ಟಿ ಅಕ್ಕಿಯನ್ನು ಪುಟ್ಟಿಯಲ್ಲಿ ತುಂಬಿ ಗುರುಮಠಕ್ಕೆ ಅತ್ತಿಗೆಯನ್ನು ಕಳುಹಿಸುತ್ತಾಳೆ. ಬಸವಣ್ಣ ಗುರುಮಠದಲ್ಲಿ ಚಿನ್ನದ ಕೊಳಗದಿಂದ ಅಕ್ಕಿಯನ್ನು ಅಳೆಯುತ್ತಾನೆ. ಆಗ ನೀನು ಸತ್ಯವಂತೆ ನೀಲಮ್ಮ ಎನ್ನುತ್ತಾನೆ.

ಮತ್ತೆ ಬೇರೊಂದು ಪರೀಕ್ಷೆಯನ್ನು ಒಡ್ಡುತ್ತಾನೆ. ಕಾವೇರಿ ನದಿಗೆ ಹೋಗಿ ನೀನು ಹಾವಿನ ಸಿಂಬಿ ಮಾಡಿಕೊಂಡು ಒಂದು ಮರಳಿನ ಬಿಂದಿಗೆಯಲ್ಲಿ ನೀರು ತರಬೇಕು ಮತ್ತು ಅದರಲ್ಲಿ ಒಂದು ಕೊಳಗ ಅಕ್ಕಿ ಹಾಕಿ ಒಂದು ಬದನೇ ಕಾಯಿಯಿಂದ ಸಾರು ಮಾಡಬೇಕು. ನಂತರ ಲಕ್ಷದ ಮ್ಯಾಲೆ ತೊಂಬತ್ತಾರು ಗಣಗಳಿಗೆ ನೀನು ಬಡಿಸಬೇಕು ಎಂದಾಗ ಅವಳು ಆ ಪರೀಕ್ಷೆಯಲ್ಲೂ ಗೆಲ್ಲುತ್ತಾಳೆ. ಮಡದಿಯ ಸತ್ಯಕ್ಕೆ ಮೆಚ್ಚಿ ನೂರೊಂದು ಲಿಂಗಕ್ಕೆ ಪೂಜೆ ಮಾಡಿ ಜ್ಯೋತಿಷ್ಯವನ್ನು ನೋಡುತ್ತಾರೆ.

೧. ಚಿಕ್ಕ ದಣ್ಣಾಯಕ –ಚೆನ್ನಬಸವಣ್ಣ(ಸಂಪಾದಕರು), ಮಲೆಯೂರು ಗುರುಸ್ವಾಮಿ, ದೇವಯ್ಯ ಹರವೆ.

ಬಾರಿಪಂಚಾಂಗ ತೆಗೆದಾರು ಬಸವಣ್ಣ
ಓದಿದದು ತಮ್ಮ ಮನಸಾರೆ ಸುವ್ವಿ

ಹೀಗೆ ಪಂಚಾಂಗ ನೋಡಿ ಮಕ್ಕಳ ಫಲವಿಲ್ಲಾ ಎಂದು ಗೊತ್ತಾಗುತ್ತದೆ ತ್ರಿಮೂರ್ತಿಗಳ ಹತ್ತಿರ ಹೋಗಿ ಪಂಚಾಂಗ ನೋಡಿಸಿದಾಗ ಅಲ್ಲಿ ಶರಣಮನೆಯ ಪ್ರಸಾದಕ್ಕೆ ನೀನು ಉಪವಾಸ ಇದ್ದರೆ ನಿನಗೆ ಮಕ್ಕಳ ಫಲವುಂಟಾಗುತ್ತದೆ ಎಂದು ಹೇಳುತ್ತಾರೆ. ಅದೇ ರೀತಿ ಶಿವಶರಣ ಹರಳಯ್ಯನವರು ಊಟಮಾಡಿ ಉಳಿದಂತಹ ಪ್ರಸಾದವನ್ನು ಗಾರೆಯ ಗುಳಿಗೆ ಸುರಿದು ಮುಚ್ಚಳದಲ್ಲಿ ಮುಚ್ಚಿಸುತ್ತಾರೆ. ಇದರಿಂದ ಬಸವಣ್ಣ, ಕಾಳಿರುವೆ, ಕಟ್ಟಿರುವೆ, ಅಚ್ಚಿರುವೆ, ನುಚ್ಚಿರುವೆ ನೀವು ಬನ್ನಿ ಸುವ್ವಿ' ಎಂದು ಕರೆದು ಅವುಗಳಿಂದ ಪ್ರಸಾದವನ್ನು ತಂದು ಕೊಡಬೇಕೆಂದು ಬಸವಣ್ಣ ಹೇಳುತ್ತಾನೆ.

ಗಾರದ ಗುಳಿಯ ಕಂಡುಮಾಡಿ ಎರುವಿನಿಂಡು
ಪರುಸೋದ್ಯ ಬಾಯಲ್ಲಿ ಕಚ್ಚುತಾವ ಸುವ್ವಿ

ಈ ರೀತಿ ತಂದ ಪ್ರಸಾದವನ್ನು ಪಟ್ಟವಸ್ತ್ರವನ್ನು ಹಾಕಿ ಬಿಡಿಸಿಕೊಂಡು ಅದರಲ್ಲಿ ಕಟ್ಟಿಕೊಂಡರು. ರಸಬಾಳೆಹಣ್ಣು ಮತ್ತು ಸಕ್ಕರೆಯನ್ನು ಎರವಿನಿಂಡಿಗೆ ಚೆಲ್ಲುತ್ತಾರೆ, ಬಂದು ತಮ್ಮ ಗುರುಮಠದ ಮಂಚದಲ್ಲಿ ಮಲಗುತ್ತಾರೆ. ಇವರಿಗೆ ನಿದ್ರೆ ಬಂದ ಸಮಯದಲ್ಲಿ ಶಿವಗೂಡಿನಲ್ಲಿಟ್ಟಿದ ಪಟ್ಟವಸ್ತ್ರದ ಗಂಟನ್ನು ಬಿಚ್ಚಿ ನಾಗಮ್ಮ ಪ್ರಸಾದವೆಂದು ಭಾವಿಸಿ ತಿನ್ನುತ್ತಾಳೆ. ಇದರಿಂದ ನಾಗಮ್ಮ ಗರ್ಭಿಣಿಯಾಗುತ್ತಾಳೆ. ಕೊನೆಗೂ ನೀಲಮ್ಮ ಮಕ್ಕಳ ಚಿಂತೆಯಲ್ಲಿಯೇ ಇರುತ್ತಾಳೆ.

**ಬಸುರಿ ಬಾಲೆಯ ಬಯಕೆ**

ನೀಲಮ್ಮ ಮತ್ತು ನಾಗಮ್ಮ ಇಬ್ಬರು ಮಾತಾಡುತ್ತಿರುವಾಗ, ಅತ್ತಿಗೆ ನಾಗಮ್ಮನಿಗೆ ಹೆದರಬ್ಯಾಡ ಮುಂದೆ ಬರುವ ಕಷ್ಟಕ್ಕೆ ಹೆದರಬ್ಯಾಡ ಎಂದು ಹೇಳುತ್ತಾರೆ. ಲಿಂಗದ ದರ್ಶನ ಮಾಡಿಕೊಂಡು ಏಳುವರ್ಷದ ಎಳೆಯ ನಾಗಮ್ಮನಿಗೆ ಒಂದು ತಿಂಗಳ ಗರ್ಭಿಣಿಯಾದಾಗ ಏರಿಯಾ ಮ್ಯಾಲೆ ಹುಣಸೇಕಾಯಿ, ಏರಿಯ ಕೆಳ್ಗೆ ಇರುವ ಬೆಳ್ಳುಲೆಯನ್ನು, ಜಂಬುನೇರಳೆ ಹಣ್ಣು ತಿನ್ನುವ ಬಯಕೆಯಾಗುತ್ತದೆ. ಹೀಗೆ ಏಳುಮಾಸಗಳು ತುಂಬಿದಾಗ ನೀಲಮ್ಮ ಬಸವಣ್ಣನವರಿಗೆ ಓಲೆಯನ್ನು ಬರೆಯುತ್ತಾಳೆ. ನಂತರ ನಾಗಮ್ಮನಿಗೆ ಹಾಲು ಅನ್ನ ಎರದು, ಕಜ್ಜಾಯ ತುಪ್ಪಮಾಡಿ ಬಿಳಿಯ ಸೀರೆಯನ್ನು ಉಡಿಸಿದರು. ಆ ಬಿಳಿಯ ಸೀರೆಯನ್ನು ಉಡಿಸುವ ಹೊತ್ತಿನಲ್ಲಿ ಗುರುಮಠದ ಕಂಚಿನ ಕಹಳೆಯು ನುಡಿಯುತ್ತದೆ. ಇದರಿಂದ ಬಿಜ್ಜಳನಿಗೆ ವಿಷಯ ಗೊತ್ತಾಗುತ್ತದೆ. ಬಿಜ್ಜಳನು ಊರಿನ ಬಾಗಿಲಿಗೆ ಕಾವಲುಗಾರರನ್ನು ಇರಿಸುತ್ತಾನೆ. ನಾಗಮ್ಮನಿಗೆ ಬಾಳೆಪಟ್ಟಿಯ ಸೀರೆಯನ್ನು ಉಡಿಸಿ, ಮೊಗ್ಗೆಯ ರವಿಕೆ ತೊಡಿಸಿ, ಕೊರಳಿಗೆ ಪದಕ ಹಾಕಿ, ಬಾಚಿ ಬೈತಲ ತೆಗೆದು ಶಿಸ್ತು ಸಿಂಗಾರ ಮಾಡುತ್ತಾಳೆ. ಅತ್ತಿಗೆ

ಜೊತೆ ನಾಗಮ್ಮ ಹೋಗುವಾಗ ಆ ಕಾವಲುಗಾರ ನಾಗಮ್ಮ ಬಸುರಿಯಾಗಿರುವ ವಿಷಯವನ್ನು ಬಿಜ್ಜಳನಿಗೆ ತಿಳಿಸುತ್ತಾನೆ.

**ಕಲ್ಯಾಣದಲ್ಲಿ ಪಂಚಾಯ್ತಿ ಸೇರುವುದು**

ಬಸವಣ್ಣನವರು ಮಂದದ ಕಟ್ಟೆಗೆ ಬಂದು, ಕುಲದವರನ್ನು ಕೇಳುತ್ತಾರೆ. ಭಂಡಾರಿ ಚನ್ನಬಸವಣ್ಣನನ್ನು ಕೇಳಿದಾಗ ನನ್ನನ್ನು ಕರೆದ ಕಾರಣವೇನು ವಿಚಾರಿಸುತ್ತಾನೆ ನಾವು ಹೇಳುವುದಿಲ್ಲ. ನಿಮ್ಮ ತಂಗಿ ನಾಗವ್ವ ಬರಬೇಕು ಎನ್ನುತ್ತಾನೆ. ಕದ್ದಿರುವವರು ನೀವಲ್ಲಾ, ಕದ್ದಿರುವವರು ನಿಮ್ಮ ತಂಗಿ ನಾಗವ್ವ ಬರಬೇಕು ಎಂದು ಹೇಳುತ್ತಾರೆ. ಬಸವಣ್ಣನವರು ಮೋರಿನುಂಗುರದ ಗುರುತನ್ನು ಕೊಡುತ್ತಾರೆ. ಅರಗಿಣಿಯ ಕೈಲಿ ಕೊಟ್ಟು ಕಳುಹಿಸುತ್ತಾರೆ. ನಾಗಮ್ಮ ಮಂದದ ಕಟ್ಟೆಗೆ ಶಿಸ್ತು ಶೃಂಗಾರ ಮಾಡಿಕೊಂಡು ಬರುತ್ತಾಳೆ. ನೀಲಮ್ಮ ನಾಗಮ್ಮನಿಗೆ ಬಾಚಿ ಬೈತಲೆ ತೆಗೆದು, ಕೀಚಿ ಜಡೆಯನ್ನು ಇಟ್ಟು ಗರಿಯಾ ಸೀರೆಯನ್ನು ಉಡಿಸುತ್ತಾಳೆ.

"ತೋಳಿಗೆ ಬಾಪೂರಿ ನಡುವಿಗೆ ಒಡ್ಯಾಣ
ಕಾಲೀಗು ಗೆಜೆಪಿಲ್ಲಿ ಧರಿಸಿದರು ಸುವ್ವೀ"[೧]

ಹೀಗೆ ನಾಗಮ್ಮ ಬಾಗುತ ಬಳುಕುತ ಮಂದದಕಟ್ಟೆಗೆ ಬರುತ್ತಾಳೆ. ಪಂಚಾಯ್ತಿಯಲ್ಲಿ ಕುಳಿತಿರುವ ಕುಲದವರಿಗೆ ಕರೆದ ಕಾರಣವೇನು ಎನ್ನುತ್ತಾಳೆ. ಬಸವಣ್ಣ ಗುರುಮಠ ಕಟ್ಟಿಸಿದ ದಿನದಿಂದ ಕಳ್ಳತನವಾಗಿಲ್ಲ ಎಂದಾಗ "ನೀನು ಯಾರಿಗೆ ಬಸುರಾದೆ" ಎಂದು ಪ್ರಶ್ನಿಸುತ್ತಾರೆ. ಶರಣರ ಮನೆಯ ಭಿನ್ನಕ್ಕೋಗಿ ಅಣ್ಣಯ್ಯ ನನಗೊಂದು ಎಡೆಯನ್ನು ತಂದಿದ್ದರು. ಅದನ್ನು ಊಟ ಮಾಡಿದಾಗ ನಾನು ಬಸುರಾದೆ ಎನ್ನುತ್ತಾಳೆ. ಈ ಮಾತು ಕೇಳಿದ ಕುಲದವರು ನಿಂಬೆಯ ಹಣ್ಣಿನ ಮೇಲೆ ನಿಲ್ಲಬೇಕೆಂಬ ಪರೀಕ್ಷೆ ಒಡ್ಡುತ್ತಾರೆ. ನಾಗವ್ವ ನಿಲ್ಲುತ್ತಾಳೆ. ೧೨ ವರ್ಷದ ಒನಕೆಮರದಿಂದ ನಾರನ್ನು ಎಡೆಯುವಂತೆ ಹೇಳುತ್ತಾರೆ. ಅದನ್ನು ಮಾಡಿ ತೋರಿಸುತ್ತಾಳೆ. ಮೂರು ಬಂಡಿಗ ಉಕ್ಕಿನ ಕಡಲೆಯನ್ನು ಮುಂದೆ ಸುರಿಯುತ್ತಾರೆ. ಕಲ್ಯಾಣದಲ್ಲಿರುವ ಬಸುವ ೩ ಕೊಳಗ ಉಕ್ಕಿನ ಕಡಲೆಯನ್ನು ತಿನ್ನುತ್ತದೆ. ಸೂಜಿಯಲ್ಲಿರುವ ರಂಧ್ರದಲ್ಲಿ ನುಗ್ಗಬೇಕು ಎನ್ನುತ್ತಾರೆ. ನಾಗಮ್ಮ ಅದರಲ್ಲೂ ಗೆಲ್ಲುತ್ತಾಳೆ. ಕೊನೆಗೆ ಮಂಡೆಯನ್ನು ಒದರಿ ಬಂದು ನಾಗಮ್ಮ ಒಪ್ಪೀತು ನಿನ್ನ ನಿಜ ಸತ್ಯವೆಂದು. ಮರಳಿನಲ್ಲಿ ಅರಿವೆ ಮಾಡಿ, ಹಾವಿನ ಸಿಂಬಿಮಾಡಿ ನೀರಿಲ್ಲದ ಕೆರೆಯಿಂದ ನೀರು ತರಬೇಕು ಎಂದಾಗ, ಅಲ್ಲಿಂದಲೂ ನೀರನ್ನು ತರುತ್ತಾಳೆ. ಏರಿಯ ಮೇಲೆ ಹೊನ್ನುತ್ತದಲ್ಲಿದ್ದ ಸರ್ಪವನ್ನೇ ಸಿಂಬಿಯಾಗಿ ಮಾಡಿ

೧. ಚಿಕ್ಕ ದಣ್ಣಾಯಕ – ಚೆನ್ನಬಸವಣ್ಣ – ಮಲೆಯೂರು ಗುರುಸ್ವಾಮಿ, ದೇವಯ್ಯ ಹರವೆ.

ನೀರನ್ನು ತರುತ್ತಾಳೆ. ಇದರಿಂದ ನಾಗಮ್ಮನ ಪಂಚಾಯ್ತಿಯ ವಿಷಯ ಮುಕ್ತಾಯ-ವಾಗುತ್ತದೆ.

ಹೀಗೆ ಜನಪದ ಕಾವ್ಯಗಳಲ್ಲಿ ಬರುವ ಕೌಟುಂಬಿಕ ಪರಿಕಲ್ಪನೆಗಳನ್ನು ಅಧ್ಯಯನ ಮಾಡಿ ಅವುಗಳಲ್ಲಿರುವ ಕುಟುಂಬ ವ್ಯವಸ್ಥೆ, ಅಲ್ಲಿರುವ ಆಚರಣೆಗಳು, ಸಂಪ್ರದಾಯಗಳನ್ನು ಈ ಮೇಲಿನ ೫ ಕಾವ್ಯಗಳಲ್ಲಿ ಸಾಧ್ಯವಾದ ಮಟ್ಟಿಗೆ ಕುಟುಂಬಕ್ಕೆ ಸಂಬಂಧಿಸಿದ ವಿಚಾರಗಳನ್ನು ತಿಳಿಸಲು ಪ್ರಯತ್ನಿಸಿದ್ದೇನೆ.

# ಅಧ್ಯಾಯ – ೫

# ಜನಪದ ಕಾವ್ಯಗಳಲ್ಲಿ ಭಕ್ತಿ ಮತ್ತು ನಂಬಿಕೆ

ಭಕ್ತಿ ಮತ್ತು ನಂಬಿಕೆಗಳನ್ನು ಕುರಿತಂತೆ ಖಚಿತವಾದ ವಿವರಣೆ ಕೊಡುವುದು ಕಷ್ಟಸಾಧ್ಯ. ಜನಪದ ಸಂಪ್ರದಾಯದಲ್ಲಿ ಸಂಪ್ರದಾಯ, ಪದ್ಧತಿ, ಸಂಸ್ಕಾರ, ಆಚರಣೆ, ಆರಾಧನೆ ಇಂಥ ಪದಗಳ ನಡುವೆ ಅಪಾರವಾದ ವ್ಯತ್ಯಾಸಗಳನ್ನು ಕಾಣಲು ಸಾಧ್ಯವಿಲ್ಲವಾದರೂ ತಲೆತಲಾಂತರದಿಂದ ಜನರು ದೇವರಲ್ಲಿ ಇಟ್ಟಿರುವ ನಂಬಿಕೆಯೇ ಭಕ್ತಿಯಾಗಿದೆ.

ನಂಬಿಕೆಯೇ ಆಚರಣೆಗಳನ್ನು ಮುಂದುವರಿಸಿಕೊಂಡು ಹೋಗುತ್ತಿವೆ. ನಂಬಿಕೆಯ ಸಿದ್ಧಾಂತದ ಹಿನ್ನೆಲೆಯಲ್ಲಿಯೇ ಆಚರಣೆಗಳು ನಡೆದುಕೊಂಡು ಹೋಗುತ್ತವೆ. ಆಚರಣೆಗಳು ಹುಟ್ಟುವ ಮುನ್ನ ಪುರಾಣಗಳು ಹುಟ್ಟಿಕೊಳ್ಳುತ್ತವೆ. ನಿರ್ದಿಷ್ಟ ಸಮಾಜದಲ್ಲಿ ಒಂದು ಜಾತಿ ಅಥವಾ ಉಪಜಾತಿಯಲ್ಲಿ ಬಳಕೆಯಲ್ಲಿರುವ ಆಚರಣೆಗಳೇ ಪ್ರಬಲವಾದ ಕಾರಣಗಳಾಗಿವೆ.

ಒಂದು ಜನಾಂಗದ ಒಬ್ಬ ವ್ಯಕ್ತಿ ಇಷ್ಟಪಟ್ಟು ಒಂದು ಆಚರಣೆಯನ್ನು ಸೃಷ್ಟಿ ಮಾಡಲು ಸಾಧ್ಯವಿಲ್ಲ. ಒಂದು ಜನಾಂಗದ ಜೀವನ ವಿಧಾನದ ಬೇಡಿಕೆಯ ಅಂಗವಾದ ಆಚರಣೆಗಳು, ಭಕ್ತಿ, ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ಮಾನವನ ಬದುಕಿಗೆ ಸಂಬಂಧಿಸಿದ ಆಚರಣೆಗಳು, ನೈಸರ್ಗಿಕ ಕ್ರಿಯೆಗಳಿಗೆ ಸಂಬಂಧಿಸಿದ ಆಚರಣೆಗಳು, ಹೊಸ ಜೀವನ ವಿಧಾನವನ್ನು ಅನುಸರಿಸುವಾಗ ಬೇಟೆ, ಕೃಷಿ, ಪಶುಪಾಲನೆ ಹೀಗೆ ಮಾನವನ ಆರ್ಥಿಕ ಸ್ಥಿತಿಗತಿಗನುಗುಣವಾಗಿ ಹೊಸ ರೂಪವನ್ನು ಪಡೆದುಕೊಳ್ಳುತ್ತವೆ.

ಜನಪದ ಕಾವ್ಯಗಳು ಅತ್ಯಂತ ವಿಸ್ತಾರವಾದ ಒಂದು ಜನಾಂಗದ ಆರಾಧ್ಯ ದೈವವನ್ನು ಕುರಿತಂತೆ ರಚನೆಯಾಗಿವೆ. ಆದ್ದರಿಂದ ಅವರವರ ಭಾವಗಳಿಗೆ ತಕ್ಕಂತೆ ಭಕ್ತಿ ಮತ್ತು ನಂಬಿಕೆ, ಪವಾಡಗಳನ್ನು ಮೆರೆದಿರುವುದನ್ನು ಕಾಣುತ್ತೇವೆ. ಹಲವಾರು ದೇವತೆಗಳನ್ನು ಮಾನವರು ಸೃಷ್ಟಿಸಿ, ಪೂಜೆ, ಆರಾಧನೆ, ಜಾತ್ರೆಗಳು, ಉತ್ಸವಗಳು, ಪವಾಡಗಳನ್ನು ಮೆರೆದಿರುವ ವ್ಯಕ್ತಿಗಳನ್ನು ಜಾನಪದ ಕಾವ್ಯಗಳಲ್ಲಿ ಕಾಣುತ್ತೇವೆ. ಇದರಿಂದ ಜನರಲ್ಲಿ ಅದೇ ಸಂಪ್ರದಾಯಗಳು, ಪದ್ಧತಿಗಳು ರೂಢಿಯಲ್ಲಿ ಇಂದಿಗೂ ಆಚರಣೆಯಲ್ಲಿವೆ.

## ಮಲೆಯ ಮಾದೇಶ್ವರ ಕಾವ್ಯದಲ್ಲಿ ನಂಬಿಕೆ ಮತ್ತು ಭಕ್ತಿ

**ಶ್ರವಣನ ಬೆಟ್ಟ:** ಮಾದೇಶ್ವರ ಸಂಹರಿಸಿದ ಶ್ರವಣನ ಬೆಟ್ಟ ಕೊಯಮತ್ತೂರು ಜಿಲ್ಲೆಯ ಸತ್ಯಮಂಗಲಂ ರಸ್ತೆಯಲ್ಲಿ ಗೋಪಿತಾಲೂಪಿನ ಗೇರ್ಮಾಳದ ಬಳಿ ಇದೆ. ಇಲ್ಲಿ ಶ್ರವಣನು

ಚಮ್ಮಾಳ್ಗೆಯನ್ನು ಮೆಟ್ಟಲು ಹೋಗಿ ಕಾಲು ಜಾರಿದ ಹೆಜ್ಜೆಯ ಗುರುತುಗಳು ಬಂಡೆಯ ಮೇಲೆ ಇಂದಿಗೂ ಸಹ ಇದೆ. ಇದು ಜನರ ನಂಬಿಕೆಯೂ ಕೂಡ ಆಗಿದೆ.

**ತವಸೆರೆಬೆಟ್ಟ:** ಶ್ರವಣನನ್ನು ಮಾದೇಶ್ವರ ಸಂಹರಿಸಿ, ನಂತರ ಮಾದೇಶ್ವರ ತಪಸ್ಸು ಮಾಡಿದ ಸ್ಥಳ. ತವಸರ ಬೆಟ್ಟ ಇದು ತಾಳು ಬೆಟ್ಟದ ಎದುರುಗಿದೆ. ಈ ತವಸರೆ ಬೆಟ್ಟದ ಸಮೀಪದಲ್ಲಿರುವ ಬೆಟ್ಟವೇ 'ಕಂಬದಬೋಳಿ' ಈ ಕಂಬದಬೋಳಿ ಬೆಟ್ಟದಲ್ಲಿ ಮಾದೇಶ್ವರ ತವಸದ ಕಂಬವನ್ನು ನೆಟ್ಟಿದ್ದಾನೆ. ಅದು ಈಗಲೂ ಇದೆ. ವಿಶೇಷ ದಿನಗಳಲ್ಲಿ ಆ ಕಂಬಕ್ಕೆ ಪೂಜೆ ಸಲ್ಲಿಸುತ್ತಾರೆ. ಪರಿಸೆ ಜನರು ಬಂದು ಅನೈತಿಕ ಸಂಬಂಧವನ್ನು ಮಾಡಿದರೆ ಆ ಕಂಬದ ಮೇಲೆ ಕೊಂಗಳ್ಳಿ ಮಲ್ಲಪ್ಪನನ್ನು ಕೂರಿಸಿದ್ದಾನೆಂಬ ನಂಬಿಕೆ ಇದೆ. ಅಂತವರನ್ನು ಹುಲಿ ಕುಕ್ಕಿ ಸಾಯಿಸುತ್ತದೆ ಎಂಬ ನಂಬಿಕೆ ಜನರಲ್ಲಿ ಇಂದಿಗೂ ಕೂಡ ಇದೆ. ಈ ಕೊಂಗಳ್ಳಿ ಮಲ್ಲಪ್ಪ ಹುಲಿಯನ್ನು ಬಿಡುತ್ತಾನೆ ಎಂಬ ನಂಬಿಕೆ ಜನರಲ್ಲಿ ಇಂದಿಗೂ ಕೂಡ ಆಳವಾಗಿ ಬೇರೂರಿದೆ.[೧]

**ಕೊಂಡದ ಗುಳಿಕಾನು:** ಮಾದೇಶ್ವರ ನಾಗಮಲೆಯಲ್ಲಿ ನೆಲೆಸುವಾಗ ತನ್ನ ಹುಲಿಯನ್ನು ಸಂಕುಮಲೆಯಲ್ಲಿ ಸಂಕೋಲೆಯಿಂದ ಬಿಗಿದು ಗವಿಯಲ್ಲಿಟ್ಟಿದ್ದಾನೆ ಎಂಬ ನಂಬಿಕೆ ಇದೆ. ಸಂಕುಮಲೆ ದೇವಾಲಯದಿಂದ ದಕ್ಷಿಣಕ್ಕೆ ೧೦ ಮೈಲಿ ದೂರದಲ್ಲಿದೆ ಮಾದೇಶ್ವರನು ಹುಲಿಯನ್ನು ಕಟ್ಟಿ ಒಡೆದ ಹೆಜ್ಜೆಯ ಗುರುತು ಬಂಡೆಯಲ್ಲಿವೆ. ಈ ಬಂಡೆಯನ್ನು 'ಪಾದ್ದರೆ' ಎಂದು ಕರೆಯುತ್ತಾರೆ. ಈ ಪಾದ್ದರೆಬೆಟ್ಟ ಶಂಕುಮಲೆಗೆ ಒಂದು ಮೈಲಿ ದೂರದಲ್ಲಿದೆ. ಈ ಸುತ್ತಿನ ಕಾಡನ್ನು ಕೊಂಡದಗುಳಿಕಾನು ಎನ್ನುತ್ತಾರೆ. ಇದಕ್ಕೆ ಈ ಹೆಸರು ಬರಲು ಕಾರಣವೇನೆಂದರೆ ನೀಲಯ್ಯ ಶಂಕಮ್ಮನ ಶೀಲವನ್ನು ಶಂಕಿಸಿ ಈ ಸ್ಥಳದಲ್ಲಿ ಬೆಂಕಿಗೆ ತಳ್ಳಿದನಂತೆ ಆ ಕಾರಣದಿಂದ ಈ ಹೆಸರು ಬಂದಿದೆ ಎಂಬುದು ಜನಪದರ ನಂಬಿಕೆಯಾಗಿದೆ. ಈ ಬೆಟ್ಟದ ಸುಮಾರು ಮೂರು ಮೈಲಿ ದೂರದಲ್ಲಿ ಕಾರಯ್ಯ ಮತ್ತು ಬಿಲ್ಲಯ್ಯನ ಗದ್ದಿಗೆಗಳಿವೆ.

**ನಾಗಮಲೆ:** ಇದು ಮಾದೇಶ್ವರನ ದೇವಾಲಯದ ಪೂರ್ವಮುಖಕ್ಕೆ ೯ ಮೈಲಿ ದೂರದಲ್ಲಿದೆ. ಕಲ್ಲಿನಿಂದ ಜೋಡಿಸಲ್ಪಟ್ಟಿದೆ. ಆಶ್ಚರ್ಯವೆಂದರೆ ನೈಸರ್ಗಿಕವಾಗಿ ನಿರ್ಮಿತವಾಗಿದೆ. ಮಾದೇಶ್ವರ ತನ್ನ ಅಂತ್ಯಕಾಲದಲ್ಲಿ ಜೀವಿಸಿದನೆಂದು ತಿಳಿದು-ಬರುತ್ತದೆ. ಸುಮರು ೨೫-೩೦ ಅಡಿ ಎತ್ತರದ ಲಿಂಗಾಕಾರದ ಬಂಡೆಯನ್ನು ಅದರ ಹಿಂಭಾಗದಲ್ಲಿ ನಾಗರಸೆಡೆಯಂತೆ ಮತ್ತೊಂದು ಬಂಡೆ ಚಾಚಿಕೊಂಡಿದೆ. ನಾಗಲಿಂಗ ಪುಷ್ಪವನ್ನು ಹೋಲುವಂತಿದೆ. ಈ ಲಿಂಗದ ಮೇಲೆ ಒಂದು ಚಿಕ್ಕ ಬಂಡೆಯಿದೆ. ಅದನ್ನು ಗೊಟ್ಟಿಕಾಯೆಂದು ಹೇಳುತ್ತಾರೆ. ಈ ಬಂಡೆಯ ಮೇಲೆ ಒಬ್ಬ ಕುರುಬರ

೧. ಮಲೆಯ ಮಾದೇಶ್ವರ – ಪಿ.ಕೆ.ರಾಜಶೇಖರ ಪ್ರಸ್ತಾವನೆ, ಪು. ೧೬.

ಹುಡುಗ ಗೊಟ್ಟಿಕಾಯನ್ನು ಚಚ್ಚುತ್ತಿದ್ದನಂತೆ, ಮಾದೇಶ್ವರ ಕೋಪಗೊಂಡು ಅವನನ್ನು ತಳ್ಳಿದನಂತೆ ಆ ಗೊಟ್ಟಿಕಾಯಿ ಕಲ್ಲಾಯಿತೆಂದು ಜನರು ಹೇಳುತ್ತಾರೆ. ಆ ಕಲ್ಲು ಬಂಡೆ ಈಗಲೂ ಬೆಳೆಯುತ್ತದೆ. ಆ ಲಿಂಗ, ಸರ್ಪಗಳು ಬೆಳೆಯುತ್ತಿವೆ. ಇವೆರಡಕ್ಕೂ ನಾನು ಹೆಚ್ಚು ಬೆಳೆಯುತ್ತೇನೆಂದು ಅವುಗಳನ್ನು ಹಿಂದಕ್ಕೆ ತಳ್ಳಿದನಂತೆ ಆದರೂ ಮಾದೇಶ್ವರನಿಗೆ ನೆರಳಾಗಲೆಂದು ಸರ್ಪ ಬೆಳೆದು ಬೆಳೆದು ಬರುತ್ತಿದೆ. ಈ ಅದ್ಭುತವಾದ ನೈಸರ್ಗಿಕವಾದ ಮಲೆ ಇದಾಗಿದೆ. ಹೆಂಗಸರಿಗೆ ಮೊದಲು ಪ್ರವೇಶವಿರಲಿಲ್ಲ. ಇತ್ತೀಚೆಗೆ ಹೆಂಗಸರು ಹೋಗುತ್ತಾರೆ. [೧]

**ಹಾಲರವಿ ಉತ್ಸವ:**ಮಾದೇಶ್ವರನ ದೇವಾಲಯದ ಎದುರಿಗೆ ತಮ್ಮಡಿಗೇರಿ ಇದೆ. ಸ್ವಲ್ಪ ದೂರದಲ್ಲೇ ಸಾಲೂರು ಮಠವಿದೆ. ಈ ಮಠದಲ್ಲಿ ಇಬ್ಬಿಬ್ಬರೂ ಸ್ವಾಮಿಗಳು ಇರುವ ಪದ್ಧತಿ ಹಿಂದಿನಿಂದಲೂ ಬೆಳೆದುಬಂದಿದೆ. ಇಲ್ಲಿಯವರೆಗೆ ೧೨ ಜೋಡಿ ಸ್ವಾಮಿಗಳು ಮಠಾಧಿಪತಿ ಗಳಾಗಿದಾರೆ. ಈ ಮಠದಲ್ಲಿ ಶ್ರೀ ಮಹಾದೇವಸ್ವಾಮಿ ಮತ್ತು ಮಲ್ಲಿಕಾರ್ಜುನ ಸ್ವಾಮಿ ಎಂಬುವವರು ಇದ್ದಾರೆ.

ತಮ್ಮಡಿಗಳಲ್ಲಿ ಹೂಜುಮಲೆ ಪಾಲಿನ ಮನೆತನ ಮತ್ತು ಮಣ್ಣೆಪಾಲಿನ ಮನೆತನದರೆಂಬ ಪಂಗಡಗಳಿವೆ. ಹಾಲಳ್ಳದಿಂದ ತೀರ್ಥ ತರುವವರು ಹೂಜುಮಲೆ ಪಾಲಿನವರು, ಮಣ್ಣೆ ಪಾಲಿನವರು ಪೂಜಾ ವೇಳೆಯಲ್ಲಿ ನಗಾರಿ, ನೌಪತ್ತುಗಳನ್ನು ಬಾರಿಸುತ್ತಾರೆ. ಹಾಲಳ್ಳದಿಂದ ಹೂಜುಮಲೆ ಪಾಲಿನ ಹೆಣ್ಣುಮಕ್ಕಳು ತೀರ್ಥ ತರುವ ಪದ್ಧತಿ ಹಿಂದಿನಿಂದಲೂ ಇದೆ. ಹೆಣ್ಣು ಮಕ್ಕಳು ಬಹಳ ಕಟ್ಟುನಿಟ್ಟಿನಿಂದ ಹಾಲಳ್ಳಕ್ಕೆ ಹೋಗಿ ತೀರ್ಥ ತಂದು ಕತ್ತಿಪವಾಡದ ಹಳ್ಳದ ಬಳಿ ಇಡುತ್ತಾರೆ. ಅಲ್ಲಿಗೆ ಸಾಲೂರು ಮಠದ ಸ್ವಾಮಿಗಳು ವೀರಗಾಸೆ ಕಟ್ಟಿಕೊಂಡು ಕುಣಿಯುವ ತಮ್ಮಡಿಗಳೊಂದಿಗೆ ತೀರ್ಥವನ್ನು ಹೊತ್ತೊಯ್ಯುತ್ತಾರೆ.

ತಮ್ಮಡಿಗಳು ಆವೇಶದಿಂದ ಕುಣಿಯುತ್ತಿರುತ್ತಾರೆ. ಇಬ್ಬರು ಬಲವಾಗಿ ಹಿಡಿದುಕೊಂಡಿರುವ ಹರಿತವಾದ ಕತ್ತಿ ಮೇಲೆ ಈ ತಮ್ಮಡಿಗಳು ಬೀಳುತ್ತಾರೆ. ಅವರಿಗೆ ಯಾವುದೇ ತೊಂದರೆಯೂ ಆಗುವುದಿಲ್ಲ. ಅಲ್ಲಿಂದ ನಡೆಮಡಿ ಹಾಸಿ ಕರೆದು ತಂದು ಅರಣೆಗಡಿಯ ತೀರ್ಥದಿಂದ ಅಭಿಷೇಕ ಮಾಡುತ್ತಾರೆ. ದೀಪಾವಳಿ ತಿಂಗಳಲ್ಲಿ ಹಾಲರವಿ ಉತ್ಸವ ನಡೆಯುತ್ತದೆ. ದೀಪಾವಳಿ, ಯುಗಾದಿ ತಿಂಗಳಲ್ಲಿ ರಥೋತ್ಸವ ನಡೆಯುತ್ತದೆ. ಕಾರ್ತಿಕಮಾಸ, ಗೌರಿ ತಿಂಗಳು, ದಸರಾ ಸಮಯದಲ್ಲಿ ಉಯ್ಯಾಲೋತ್ಸವ ನಡೆಯುತ್ತದೆ. ಪ್ರತಿನಿತ್ಯ ಹುಲಿವಾಹನದಲ್ಲಿ, ವೃಷಭ ವಾಹನದಲ್ಲಿ,

---

೧. ಮಲೆಯ ಮಾದೇಶ್ವರ–ಪಿ.ಕೆ.ರಾಜಶೇಖರ ಪ್ರಸ್ತಾವನೆ ಪುಟ – ೧೯.

ರುದ್ರಾಕ್ಷಿಮಂಟಪದಲ್ಲಿ ದಿನ ನಡೆಯುತ್ತವೆ. ಮಾದೇಶ್ವರನ ಲಿಂಗಕ್ಕೆ ಬಂಗಾರದ ಕೊಳಗ, ಬೆಳ್ಳಿಕೊಳಗದ ಅಲಂಕಾರಗಳು ನಡೆಯುತ್ತವೆ.

**ಶೇಷಣ್ಣೊಡೆಯರ ಉತ್ಸವ**: ಈ ಉತ್ಸವ ಅತ್ಯಂತ ವಿಶೇಷವಾಗಿದೆ. ಶೇಷಣ್ಣೊಡೆಯರ ಗದ್ದಿಗೆ ಮಾದೇಶ್ವರ ದೇವಾಲಯ ಮತ್ತು ಸಾಲೂರು ಮಠದ ನಡುವೆ ಇದೆ. ಈತ ಮಾದೇಶ್ವರನ ಶಿಷ್ಯ. ಇದು ೧೨ ವರ್ಷಕ್ಕೊಮ್ಮೆ ಈ ಉತ್ಸವ ನಡೆಯುತ್ತದೆ. ಈ ವಿಧಿ ವಿಧಾನ ಹಿಂದಿನಿಂದಲೂ ನಡೆದುಬಂದಿದೆ.

ಶೇಷಣ್ಣೊಡೆಯರ ಉತ್ಸವಕ್ಕೆ ಅನ್ನದ ಎಡೆಮಾಡುತ್ತಾರೆ. ಇದಕ್ಕೆ ಅಗರದ ಗಂಗಡಕಾರ ಒಕ್ಕಲಿಗರ ಗದ್ದೆ ಗೊನೆ ಮೇಗಳ ಭತ್ತ, ಆಲಮನೆ ಕೊಪ್ಪರಿಕೆಯಲ್ಲಿ ಆಗತಾನೆ ಅರೆದು ಮಾಡಿದ ಹೊಸ ಬೆಲ್ಲ. ಯಳಂದೂರು ಕಾಯಿ, ತಮಿಳು ನಾಡಿನ ಮಲ್ಲಮ್ಮನದುರ್ಗದ ಬಾಳೇಹಣ್ಣು, ಮೈಸೂರಿನ ನೂರೆಂಟು ಮೊಳ ಚಂದ್ರಾವಿ ಇವೆಲ್ಲವನ್ನು ಅಣಿ ಮಾಡಿಕೊಳ್ಳುತ್ತಾರೆ.

ದೇವಾಲಯದ ಸಮೀಪದಲ್ಲಿ ಹೊಸದಾದ ಮರದ ಒರಳು, ಮರದ ಒನಕೆ ಮಾಡಿ ಅದರಲ್ಲಿ ಹಸಿ ಭತ್ತವನ್ನು ಕುಟ್ಟುತ್ತಾರೆ. ಉಪವಾಸದಲ್ಲಿರುವ ಪೂಜಾರಿ ಮಾಡಿಕೊಟ್ಟ ಹಸಿಕರಗಕ್ಕೆ ಅಕ್ಕಿ ಹಾಕಿ ಅಂತರಗಂಗೆಯ ನೀರನ್ನು ಹಾಲನ್ನು ಬೆರೆಸುತ್ತಾರೆ.

ಕಟ್ಟುನಿಟ್ಟಿನಿಂದಿದ್ದ ಪೂಜಾರಿ ಕುದಿಯುತ್ತಿರುವ ಮಡಕೆಗೆ ಕೈಹಾಕಿ ಅನ್ನವನ್ನು ತಿರುವುತ್ತಾನೆ. ಕೊತ ಕೊತನೆ ಕುದಿಯುತ್ತಿದ್ದ ಕರಗಕ್ಕೆ ಅವನು ಕೈ ಹಾಕಿದರೂ ಅವನಿಗೆ ಸಣ್ಣದೊಂದು ಬೊಬ್ಬೆಯು ಬರುವುದಿಲ್ಲ. ಈ ರೀತಿ ಮಾಡಿದ ಅನ್ನವನ್ನು ಶೇಷಣ್ಣನಿಗೆ ಎಡೆಮಾಡಿ ನೂರೆಂಟು ಸಲ ಪೂಜೆ ಮಾಡಿ ಕುಂಭಾಭಿಷೇಕ ಮಾಡುತ್ತಾರೆ. [೧]

ಶೇಷಣ್ಣ ಹಿಂದೆ ದನಕಾಯುತ್ತಿದ್ದನು ಎಂಬ ಪ್ರತೀತಿ ಇದೆ. ಆದ್ದರಿಂದ ಅವನ ಪೂಜೆಗೆ ಒಂದು ಬೆಳ್ಳಿ ಕೊಳಲು, ಒಂದು ಕತ್ತಿ, ಒಂದು ಕೊಡಲಿಯನ್ನು ಗದ್ದಿಗೆ ಮೇಲೆ ಇಡುತ್ತಾರೆ. ಪೂಜೆ ನಡೆಯುವ ದಿನವಿಡೀ ತಮ್ಮಡಿಗಳು ಮತ್ತು ಮಠದ ಸ್ವಾಮಿಗಳು ಉಪವಾಸದಿಂದಿರಬೇಕು. ಬೆಳಕರಿಯೋ ಹೊತ್ತಿಗೆ ಮಾತ್ರ ಊಟ ಮುಗಿಸಬೇಕು, ಇದೇ ರೀತಿ ೧೫ ದಿನಗಳು ಇದ್ದು ಪೂಜೆಯನ್ನು ಸಲ್ಲಿಸಿದ ನಂತರ ೧೫ ದಿನ ತೀರ್ಥಯಾತ್ರೆ ಹೋಗಬೇಕು.

**ಎಣ್ಣೆಮಜ್ಜನ**:ಮಾದೇಶ್ವರನಿಗೆ ಸರಗೂರಪ್ಪನ ಸೇವೆಯೂ ಹಿಂದಿನಿಂದ ನಡೆದು ಬಂದ ಸಂಪ್ರದಾಯವಾಗಿದೆ. ಸರಗೂರಪ್ಪನವರು ಪ್ರತಿ ತಿಂಗಳು ಬೆಟ್ಟಕ್ಕೆ ಬಂದು ಸವಾಮಿಗೆ

---

೧. ಮಲೆಯ ಮಾದೇಶ್ವರ(ಸಂ.೧)ಪಿ.ಕೆ.ರಾಜಶೇಖರ, (ಪ್ರಸ್ತಾವನೆ) ಪುಟ – ೨೦.

ಎಣ್ಣೆ ಮಜ್ಜನ ಮಾಡಿ ಹೋಗುವ ರೂಢಿ ಇದೆ. ಒಂದು ಸೇರೆಳ್ಳು, ಒಂದು ಅಡಕೆ ಹೊಂಬಾಳೆ, ಒಂದೆಳನೀರು, ಒಂದು ಸೇರಕ್ಕಿ, ಒಂದಚ್ಚು ಬೆಲ್ಲ, ಎಲೆ, ಅಡಕೆ, ಕಡ್ಡಿ, ಕರ್ಪೂರ, ನಾಲ್ಕಾಣೆ ಇವೆಲ್ಲವನ್ನು ದೇವಸ್ಥಾನಕ್ಕೆ ಕೊಡುತ್ತಾರೆ. ಎಳ್ಳನ್ನು ತಳಿಗೆ ಮನೆಯಲ್ಲಿ ಅರೆದು ಎಣ್ಣೆ ತೆಗೆದು ಮಾದೇಶ್ವರ ಲಿಂಗಕ್ಕೆ ಎಣ್ಣೆ ಮಜ್ಜನ ಮಾಡಿಸುತ್ತಾರೆ. ಇದು ಪ್ರತಿ ಅಮಾವಾಸೆಯ ಹಿಂದಿನ ದಿನ ಎಣ್ಣೆಮಜ್ಜನ ಸೇವೆ ಪ್ರತಿ ತಿಂಗಳು ತಪ್ಪದೇ ಇಂದಿಗೂ ನಡೆಯುತ್ತದೆ.

ಸರಗೂರಪ್ಪನವರು ಮಾದೇಶ್ವರನ ಶಿಶುಮಕ್ಕಳಾದ ರಾಮವ್ವ ಮೂಗಪ್ಪರ ವಂಶಜರು. ಎಣ್ಣೆ ಮಜ್ಜನವಲ್ಲದೆ, ಪ್ರತೀ ವರ್ಷ ದೇವಾಲಯಕ್ಕೆ ಒಂದು ಗದ್ದಿಗೆ ದಾವುಳಿ, ಸಾಲೂರು ಮಠಕ್ಕೊಂದು ಗದ್ದುಗೆ ದಾವುಳಿ, ಒಂದೊಂದು ಕಂಬಳಿಯನ್ನು ತಂದೊಪ್ಪಿಸುತ್ತಾರೆ. ದಾಸಯ್ಯನ ರೀತಿ ವೇಷ ಹಾಕಿಕೊಂಡು ನಾಮಧರಿಸಿ, ಬಂದ ಪರಿಸೆಗೆಲ್ಲಾ ಎಣ್ಣೆಮಜ್ಜನ ಪ್ರಸಾದ ನೀಡಿ ಕಾಣಿಕೆ ಪಡೆಯುವ ಪದ್ಧತಿ ಇಂದಿಗೂ ಕೂಡ ನಡೆಯುತ್ತದೆ.

**ಈರತಕಟ್ಟೆ ಮತ್ತು ಬಸವನಕಟ್ಟೆ:** ಮಾದೇಶ್ವರನ ದೇವಾಲಯದ ಎಡದ್ವಾರದಲ್ಲಿರುವ ಈರತಕಟ್ಟೆ ಬಸವನಕಟ್ಟೆಗಳಲ್ಲಿ ಸಾಲೂರು ಮಠದಿಂದ ಬಂದ ಜಂಗುಮರ ಸಾಲು ಕುಳಿತಿರುತ್ತದೆ. ಇವರು ಪರಿಷೆ ಜನರಿಗೆ 'ಕಟ್ಟಿಗೆ ಕಳಬೆಲ್ಲ ನೀಡಿ' ಎಂದು ಹೇಳುತ್ತಿರುತ್ತಾರೆ. ಭಕ್ತರಿಗೆ ೩ ಹಿಡಿ ಕಡಲೆಯನ್ನು ಹಾಕಿ ಮತ್ತೆ ಪ್ರಸಾದ ರೂಪದಲ್ಲಿ ನೀಡುತ್ತಾರೆ. ಕಾರಣ ಕೇಳಿದರೆ ಉಕ್ನಳ್ಳಿಯಲ್ಲಿ ಮಾದೇಶ್ವರ ಬಸವನಿಗೆ ಉಕ್ಕಿನ ಕಡಲೆ ತಿನ್ನಿಸಿದ್ದನಂತೆ ಅದಕ್ಕಾಗಿ ಈಗಲಾದರೂ ಜಂಗಮರಿಗೆ ಕಡಲೆ ತಿನ್ನಿಸೋಣ ಎಂದು ಹೇಳುವ ಸಂಪ್ರದಾಯ ಇಂದಿಗೂ ಬಂದಿದೆ.[೧]

ದೇವಾಲಯದ ಬಲದ್ವಾರದಲ್ಲಿ ಆಲಂಬಾಡಿ ಬಸವನ ವಿಗ್ರಹವಿದೆ. ಈ ಬಸವ ಆಲಂಬವಾಡಿ ರಾಜ್ಯದ ಕಡೆಗೆ ಮುಖಮಾಡಿದೆ. ಅದ್ರಿಗೆ ಬಂದ ದನಗಳು ಈ ಬಸವನನ್ನು ದಿಟ್ಟಿಸಿದರೆ ಗಬ್ಬವಾಗುತ್ತವೆ ಎಂಬ ಸಂಪ್ರದಾಯವಿದೆ. ಪಂಜಿನಸೇವೆ, ಉರುಳುಸೇವೆ, ಒಚ್ಚಮಗ್ಗಲು ಸೇವೆ, ದಬ್ಬಳದ ಗಾತ್ರದ ಸರಳನ್ನೂ ಬಾಯಿ, ಗಂಟಲು, ತೊಡೆ, ತೋಳು, ಹೊಟ್ಟೆಗೆ ಚುಚ್ಚಿಕೊಂಡು ತಮ್ಮಟೆಯ ಹೊಡೆತಕ್ಕೆ ಕುಣಿಯುತ್ತಾ ಹರಕೆ ಸಲ್ಲಿಸುತ್ತಾರೆ. ದೇಗುಲದ ರಜ ಹೊಡೆಯುವ ಹರಕೆ ಹೊತ್ತು ಭಕ್ತರು ಧನ್ಯರಾಗುತ್ತಾರೆ.

ಗಂಡು-ಹೆಣ್ಣು ಎಂಬ ಬೇಧವಿಲ್ಲದೆ ಎಲ್ಲಾ ಭಕ್ತರು ಮಹಾನ್ ಮಲೆಯೋ ಎಂದು ಕೂಗಿ ರಾತ್ರಿ ಇಡೀ ದೇವಾಲಯದ ಸುತ್ತ ಕುಣಿದು ಕುಣಿದು ಮಾದೇವನಿಗೆ ಹರಕೆ ಸಲ್ಲಿಸುತ್ತಾರೆ.

---

೧. ಮಲೆಯ ಮಾದೇಶ್ವರ್, (ಸಂ.೧)-ಪಿ.ಕೆ.ರಾಜಶೇಖರ, ಪು. ೨೧.

**ದೇವರಗುಡ್ಡರು:** ದಕ್ಷಿಣ ಕರ್ನಾಟಕದ ಧಾರ್ಮಿಕ ವೃತ್ತಿಗಾಯಕರಲ್ಲಿ ದೇವರ ಗುಡ್ಡರು ಅತ್ಯಂತ ಪ್ರಮುಖರು. ಇವರು ಬೆಂಗಳೂರು ಮತ್ತು ಮೈಸೂರು, ಮಂಡ್ಯ ಜಿಲ್ಲೆಯ ಕೆಲವು ಭಾಗಗಳಲ್ಲಿ ಕಾಣಸಿಗುತ್ತಾರೆ. ಮಲೆಯ ಮಾದೇಶ್ವರನ ಪರಮಭಕ್ತರಾದ ಇವರನ್ನು ಕಂಸಾಳೆಯವರು, ಕೈಸಾಳೆಯವರು ಎಂದು ಕರೆಯುವುದು ರೂಢಿಯಲ್ಲಿದೆ. ಇವರು ಬಳಸುವ ಮುಖ್ಯ ವಾದ್ಯ ಕಂಚಿನ ತಾಳಗಳು.

ಕಂಸಾಳೆಯವರನ್ನು 'ಮಾದೇಶ್ವರನ ಗುಡ್ಡರು' ದೇವರಗುಡ್ಡರು, ಸಿರಿಯದೇವರ ಗುಡ್ಡರು, ಮುಂತಾದ ಹೆಸರುಗಳಿಂದ ಕರೆಯುತ್ತಾರೆ. 'ಗುಡ್ಡ' ಎಂದರೆ ಮಾದೇಶ್ವರ ಭಕ್ತ ಅಥವಾ ಮಾದೇಶ್ವರ ಶಿಶು ಮಗ ಗುಡ್ಡನನ್ನು ಬಿಡುವುದೆಂದರೆ ಕಂಸಾಳೆಯವರ ಆಚರನೆಗಳಲ್ಲಿ ವಿಶಿಷ್ಟವಾದುದು. ವಂಶ ಪಾರಂಪರ್ಯವಾಗಿ ಬಂದ ಮಾದೇಶ್ವರನ ಒಕ್ಕಲಲ್ಲಿ ಕಡ್ಡಾಯವಾಗಿದೆ. ವಿಶೇಷ ಕಾರಣಗಳಿಂದಲೂ ಗುಡ್ಡನನ್ನು ಬಿಡುವುದು ಇದೆ. ಹುಟ್ಟಿದ ಮೊದಲನೇ ಮಗನನ್ನು ಗುಡ್ಡನಾಗಿ ಬಿಡುತ್ತಾರೆ. ೧೨ ವರ್ಷ ತುಂಬಿದಾಗ ಅವನನ್ನು ಗುರುಮಗ ಎಂದು ಕರೆಯುತ್ತಾರೆ. ಆ ಮಗನನ್ನು ಗುಡ್ಡನಾಗಿ ಬಿಡುವುದೇ ವಿಶೇಷವಾಗಿರುತ್ತದೆ. ಗುಡ್ಡಗಳ ಮುಖ್ಯಸ್ಥ 'ಪುರುಷಕಾರಿ' ಅವನ ನೇತೃತ್ವದಲ್ಲಿ ಗುಡ್ಡನನ್ನು ಬೆಟ್ಟದಲ್ಲಿ ಬಿಡುತ್ತಾರೆ.

ತುಂಬಿದ ಸೋಮವಾರ, ಮನೆ ಸಾರಿಸಿ, ಮಡಿ ಮಾಡಿಕೊಳ್ಳುತ್ತಾರೆ. ಗುಡ್ಡನಾಗುವ ಹುಡುಗನ ಉಡುದಾರವನ್ನು ಕಿತ್ತು ಮಂಡೆ ಚವುರ ಮಾಡಿಸುತ್ತಾರೆ, ಮೂಡಲು ದಿಕ್ಕಿಗೆ ಹುಡುಗನನ್ನು ಕೂರಿಸಿ ಒಂದಚ್ಚು ಬೆಲ್ಲ, ಐದು ಬಾಳೆಹಣ್ಣು, ಎಲೆ ಅಡಿಕೆ, ಐದು ಪಾವು ಅಕ್ಕಿ, ಐದು ಪಾವಲಿ (ಹಣ) ಒಂದು ವಲ್ಲಿ ಇಟ್ಟು ಪೂಜೆ ಮಾಡಿ ಮಂಡೆ ಕ್ಷೌರ ಮಾಡಿದ ಕೆಲ್ಸ ಮಡಲಿಗೆ ತುಂಬುತ್ತಾರೆ. ಸ್ನಾನಕ್ಕೆ ನೀರು ಕಾಯಿಸುವ ಒಲೆ ಮತ್ತು ಹಂಡೆಯನ್ನು ಅರಿಶಿನ ಕುಂಕುಮ ಇಟ್ಟು ಪೂಜೆ ಮಾಡಿ ನೀರು ಕಾಯಿಸುತ್ತಾರೆ. ತಲೆಮೇಲೆ ನೀರು ಹಾಕಿ 'ಮಾದೇವ ನಿನ್ನೊಕ್ಲಾಗಿರೋ ಕಂದನ ಉದ್ದಾರ ಮಾಡಪ್ಪ' ಎಂದು ಹೇಳುತ್ತಾರೆ. ಸ್ನಾನ ಮಾಡಿಸುವ ಸಂದರ್ಭದಲ್ಲಿ ಗುಡ್ಡಗಳು ಕಂಸಾಳೆ ಕುಟ್ಟುತ್ತಾ ಹಾಡುತ್ತಾರೆ.

ಹುಡುಗನು ಸ್ನಾನ ಮಾಡಿದ ಮೇಲೆ ಹೊಸ ಉಡುಪುಗಳನ್ನು ಧರಿಸಿ, ದೇವರನ್ನು ತರಲು ಹೊರಡುತ್ತಾರೆ. ಐದು ಅರಣೆ ಗಡಿಗೆಗಳನ್ನು ಹೊತ್ತು, ಕಂಸಾಳೆಯವರೊಡನೆ ಐದು ಜನ ಮುತ್ತೈದೆಯರು, ಕೆರೆಗೋ, ಬಾವಿಗೋ ಹೋಗಿ ದೇವರು ತರುತ್ತಾರೆ. ಪರ್ಸೆಕಾರಿ ಜೋಳಿಗೆಯಲ್ಲಿ ೩ ಈಬುತ್ತಿಗಟ್ಟಿ, ಕಂಸಾಳೆ, ದಮ್ಮಡಿ, ಚಿಟುಗುತಾಳ ಇಟ್ಟುಕೊಂಡಿರುತ್ತಾನೆ. ಅಲ್ಲದೆ ಕೈಯಲ್ಲಿ ನಾಗಬೆತ್ತವಿರುವ ಅರಣೆಗಡಿಗೆಗಳನ್ನು ತೊಳೆದು ನೀರು ತುಂಬಿ ಹೊಂಬಾಳೆಯನ್ನು ಈಬುತ್ತಿ ಹಚ್ಚಿ,

ಪೂರ್ವ ದಿಕ್ಕಿಗೆ ಮುಖಮಾಡಿ ಪೂಜೆ ಮಾಡುತ್ತಾರೆ. ಕಂಸಾಳೆ ವಾದ್ಯಗಳೆಲ್ಲಾ ಮೊಳಗುತ್ತಾ ದೇವರನ್ನು ತಂದು ಗದ್ದಿಗೆಯಲ್ಲಿಡುತ್ತಾರೆ.

ಈಗ ಗುಡ್ಡನಾಗುವ ಹುಡುಗನನ್ನು ತಂದೆ ತಾಯಿಯರು 'ಇವನು ನನ್ನ ಮಗನಲ್ಲ' ಎಂದು ಹೇಳಿ ಪುರುಷಕಾರಿಗೆ ಒಪ್ಪಿಸುತ್ತಾರೆ. ಅವರು ಕರಿ ಹಸೆಮಣೆಮೇಲೆ ಕರಿ ಕಂಬ್ಳಿ ಗದ್ದಿಗೆ ಹೂಡಿ ಅದರ ಮೇಲೆ ಪೂರ್ವಾಭಿಮುಖವಾಗಿ ಕೂರಿಸಿ ಅವರ ಮುಂದೆ ಅಕ್ಕಿ ತುಂಬಿರುವ ಸೇರನ್ನು ಮಡಗಿ ಅವನ ಬಲದ ಹಸ್ತವನ್ನು ಇರಿಸಿ ಅದರ ಮೇಲೆ ಹಾಲು, ಬೆಣ್ಣೆ, ತುಪ್ಪ ಸವರಿ ಹೂಮಡಗಿ, ಕರ್ಪೂರ, ಸಾಂರಾಣಿ, ಗಂಧದ ಕಡ್ಡಿಯಿಂದ ಬೆಳಗುತ್ತಾರೆ. ಅದುಮಿದ್ದ ಕೈಯನ್ನು ಎತ್ತಿಸಿ ಅಂಟಿರುವ ಅಕ್ಕಿಕಾಳನ್ನು ಅವನ ಹಣೆಗೆ ಅಂಟಿಸುತ್ತಾರೆ. ಅಕ್ಕಿ ಹಣೆಗೆ ಅಂಟಿಕೊಂಡರೆ ಅವನು ಮಾದಪ್ಪನ ನೆಚ್ಚಿನ ಮಗನೆಂಬ ನಂಬಿಕೆ ಇದೆ.

ಐದು ಕೊಂಬಿನ ಅರಿಶಿನದ ಕೊನೆಯನ್ನು ಚಿನ್ನ ಬೆಳ್ಳಿ ಚುರುಗಳೊಡನೆ ಒಂದು ಅರಿಶಿನದ ಅರಿವೆಗೆ ಸುತ್ತಿ ಅದನ್ನು ಕರಿಹುರಿಯಲ್ಲಿ ಕಟ್ಟಿ ಪೂಜೆ ಮಾಡಿ ಎಲ್ಲರಿಂದಲೂ 'ಸಣ್' ಮಾಡಿಸುತ್ತಾರೆ. ಪರ್ಸೆಕಾರಿಗೆ ಕಂಕಣವನ್ನು ಕೊಟ್ಟಾಗ ಇಲ್ಲಿಯವರೆಗೆ ತಂದೆ ತಾಯಿಯ ಮಗನಾಗಿದ್ದೆ ಇನ್ನೂ ಮುಂದೆ 'ಮಾದೇವನ ಮಗನಾದೆ' ಎಂದು ಹೇಳಿ ಅವನ ಕೈಗೆ ಕಟ್ಟಿ ಮಾದಪ್ಪ ಉದ್ಧಾರ ಮಾಡಪ್ಪ' ಎಂದು ಹೇಳಿ ರುದ್ರಾಕ್ಷಿ ಮಣಿಯನ್ನು ಕುತ್ತಿಗೆಗೆ ಧರಿಸುತ್ತಾನೆ. ಬಂದಿದ್ದವರೆಲ್ಲಾ, 'ಅಕ್ಷಯವಾಗಲಿ' ಎಂದು ಅಕ್ಷತೆ ಕಾಳನ್ನು ಹುಡುಗನ ತಲೆ ಮೇಲೆ ಎರಚುತ್ತಾರೆ.

ನೀನು ಯಾರ ಮಗನಪ್ಪ?

ನಾನು ಮಾದೇವನ ಮಗ ಸ್ವಾಮಿ

ಹಾಗಾದರೆ ತೆಗೆದುಕೋ ಮಾದೇವನ ಜೋಳ್ಗೆಯ ಎಂದು ಹೇಳಿ ಗುಡ್ಡದ ಕಂಕುಳಿಗೆ ಜೋಳಿಗೆ ಕೈಗೆ ನಾಗಬೆತ್ತ ಕೊಡುತ್ತಾನೆ. ನಾಲ್ಕಾರು ಮನೆಯಲ್ಲಿ ಸೋಮವಾರ, ಶುಕ್ರವಾರ ಭಿಕ್ಷೆ ಮಾಡು, ಪೂಜೆ ಮಾಡು,

ಏನಪ್ಪ ನಿಶ್ಚಯವಾಗ್ಲೂ ಮಾಡ್ತಿಯ

ಸ್ವಾಮಿ ನಿಚ್ಚಯವಾಗ್ಲು ಮಾಡ್ತೀನಿ

ಈ ಎಲ್ಲಾ ದರುಶನಕ್ಕೆ ಬಂದವರ ಪಾದಕ್ಕೆ ಅಡ್ಡ ಬೀಳು ಎಂದು ಹೇಳುತ್ತಾನೆ. ತಂದೆ–ತಾಯಿ, ಅಕ್ಕ–ತಂಗಿ, ಅಣ್ಣ–ತಮ್ಮ ಅತ್ಗೆ ನಾದ್ನೀರನ್ನ ಚೆನ್ನಾಗಿ ನೋಡಿಕೊಂಡು ಬೈಯದೆ ಹೊಡೀದೆ ಇರುಬೇಕು ಎನ್ನುತ್ತಾರೆ.

ಹೀಗೆ ಹೊಸ ಗುಡ್ಡನನ್ನು ಕರೆದುಕೊಂಡು ಕಂಸಾಳೆಯವರೊಡನೆ ಕ್ವಾರಣ್ಯಕ್ಕೆ ಹೊರಡುತ್ತಾರೆ. ಅಂಕದ ಬಾಗಿಲಲ್ಲಿ ಗುಡ್ಡದ ಪಾದ ತೊಳೆದು ಪೂಜೆ ಮಾಡಿ ಪಾದಕ್ಕೆ ನಮಸ್ಕಾರ ಮಾಡಿ ಐದು ಸೇರಕ್ಕಿ, ಒಂದಚ್ಚು ಬೆಲ್ಲ, ತೆಂಗಿನಕಾಯಿ, ಎಲೆ-ಅಡಿಕೆ, ಹಣ್ಣುಗಳನ್ನು ಗುಡ್ಡದ ಜೋಳಿಗೆಗೆ ಹಾಕುತ್ತಾರೆ. ಮುಂದೆ ನಾಕಾರು ಮನೆಗಳಲ್ಲಿ ಉಪಾದಾನ ಮಾಡಲು ಹೋದಾಗ ಜೋಳಿಗೆ ತುಂಬಾ ಭಿಕ್ಷೆ ಸಿಕ್ಕದೆ ಇದ್ದರೆ ಜೋಳಿಗೆ ಸೂಲುತ್ತದೆ ಎಂಬ ನಂಬಿಕೆ ಇದೆ.

ಭಿಕ್ಷೆ ಮಾಡಿಕೊಂಡು ಬಂದ ಗುಡ್ಡನನ್ನು ಬಾಗಿಲಲ್ಲಿ ನಿಲ್ಲಿಸಿ, ಪಾದ ತೊಳೆದು 'ರತ್ನೀರ್' ಹಾಕಿ ಶಾಂತಿ ಮಾಡುತ್ತಾರೆ. ಒಂದು ಕೋಳಿಯನ್ನು ಕೂದು ರಕ್ತವನ್ನು ಹುಡುಗನ ಹಣೆಗೆ ಹಚ್ಚುತ್ತಾರೆ. ತಂದ ಭಿಕ್ಷವನ್ನು ಬಿರುದುಗಳೊಡನೆ ಮೇಲಿಡುತ್ತಾರೆ.

ಪರ್ಸೆಕಾರಿ ಪೂಜೆಮಾಡಿ ಕಂಕಣ ಬಿಚ್ಚುತ್ತಾನೆ. ಕಂಕಣವನ್ನು ಅರಣಿ ಗಡಿಗೆಯಲ್ಲಿದ್ದ ಹೊಂಬಾಳೆ ಗೊನೆ ಜೊತೆಯಲ್ಲಿ ಮನೆ ಸೂರಿಗೆ ಕಟ್ಟಿಸಿ ಧೂಪ ಹಾಕುತ್ತಾರೆ.

ಇದಾದ ಮೇಲೆ ಗುಡ್ಡರ ನಡುವೆ ಆ ಹುಡುಗ ಊಟಕ್ಕೆ ಕುಳಿತುಕೊಳ್ಳುತ್ತಾನೆ. ಗದ್ದುಗೆ ಪೂಜೆ ನಡೆದು ಮನೆಯಲ್ಲಿ ಮಾಡಿದ್ದ ಕಡುಬು, ಕಜ್ಜಾಯವನ್ನು, ತುಪ್ಪವನ್ನು ಎಲ್ಲರ ಎಲೆಗೂ ಬಡಿಸುತ್ತಾರೆ. ಊಟಕ್ಕೆ ಕುಳಿತಿದ್ದ ಗುಡ್ಡಗಳೆಲ್ಲ ತಮ್ಮ ತಮ್ಮ ಅಗಲಿನಿಂದ ಸ್ವಲ್ಪ ಕಜ್ಜಾಯ ತುಪ್ಪವನ್ನು ತೆಗೆದು ಗುಡ್ಡನ ಅಗಲಿಗೆ ಬಡಿಸುತ್ತಾರೆ. ಇದನ್ನು 'ಪಂತಿಸೇವೆ' ಎಂದು ಕರೆಯುತ್ತಾರೆ. ಊಟವಾದ ಮೇಲೆ ತಂದಿದ್ದ ಭಿಕ್ಷೆಯನ್ನೆಲ್ಲಾ ಸುರಿದು ಗುಡ್ಡದ ಜೋಳಿಗೆಗೆ ಐದು ಬೊಗಸೆ ಅಕ್ಕಿ ಹಾಕಿ, ಐದು ನಾಕಾಣೆ ನಾಣ್ಯಗಳನ್ನು ಹಾಕಿ, 'ಅಕ್ಷಯವಾಗಲಿ' ಎಂದು ಎಲ್ಲರೂ ತೆರಳುತ್ತಾರೆ.

ಈ ರೀತಿಯಾದ ಗುಡ್ಡ ಪ್ರತಿ ಸೋಮವಾರ ಮತ್ತು ಶುಕ್ರವಾರಗಳಲ್ಲಿ ಮಡಿಯಿಂದ ಪೂಜೆ ಮಾಡಿ ಕ್ವಾರಣ್ಯೆಗೆ ತಪ್ಪದೆ ಹೋಗಬೇಕು. ಗುಡ್ಡರು ಹಾಡುಗಳನ್ನು ಕಲಿಸಲು ಒಪ್ಪಿಕೊಂಡ ಗುರುವಿಗೆ ವರ್ಷಕ್ಕೆ ಒಂದು ಸಾರಿ 'ಗುರುಮನೆಹಣ' ಎಂಬ ಹೆಸರಿನಿಂದ ಹಣ ಕೊಡಬೇಕು. ಗುಡ್ಡರಿಗೆ ದೀಪಾವಳಿ ಮತ್ತು ಶಿವರಾತ್ರಿಗಳು ಅತ್ಯಂತ ಪ್ರಮುಖವಾದ ಹಬ್ಬಗಳಾಗಿವೆ. ಆ ದಿನಗಳಲ್ಲಿ ಮಾದೇವನ ಬಗ್ಗೆ ಹಾಡಿ ಜೀವನ ಸಾರ್ಥಕ ಪಡಿಸಿಕೊಳ್ಳುತ್ತಾರೆ.[೧]

ಕಂಸಾಳೆ ಪದಗಳನ್ನು ಹಾಡಲು ಕೊನೇ ಪಕ್ಷ ಮೂರು ಜನ ಗುಡ್ಡರಾದರು ಬೇಕು. ದೊಡ್ಡರಾಣ್ಯಕ್ಕೆ ೪ ಜನ ಗುಡ್ಡರು ಬೇಕಾಗುತ್ತದೆ. ಒಬ್ಬ ಪದ ಹಾಡಿ ಕಂಸಾಳೆ

೧. ಮಲೆಯಮಾದೇಶ್ವರ (ಸಂ.೧)-ಪಿ.ಕೆ.ರಾಜಶೇಖರ, ಪು. ೩೧(ಪ್ರಸ್ತಾವನೆ).

ಹೊಡೆದರೆ, ಇಬ್ಬರು ಹಿಮ್ಮೇಳ ನಡೆಸುತ್ತಾರೆ. ಬೀಸು ಕಂಸಾಳೆ ನೃತ್ಯವನ್ನು ಮಾಡುತ್ತಾರೆ.

ಮಂಟೇಸ್ವಾಮಿಯ ಶಿಶುಮಕ್ಕಳಾದ ನೀಲಗಾರರು ಸಹ ಮಾದೇಶ್ವರನ ಕಥೆಯನ್ನು ಹೇಳುತ್ತಾರೆ.

**ಧೂಪದ ಕುಂಡ ಮತ್ತು ಗಾಳಿ ಬಸವ**

ಈರತ ಕಟ್ಟೆ ದ್ವಾರದಿಂದ ಪ್ರವೇಶಿಸಿದ ಕೂಡಲೇ ಧೂಪದ ಕುಂಡ ಸಿಗುತ್ತದೆ. ಈ ಕ್ಷೇತ್ರಕ್ಕೆ ಬಂದವರು ಮೊದಲು ಇಲ್ಲಿ ಸಾಂರಾಣಿ ಧೂಪವನ್ನು ಹಾಕಿ ಪ್ರದಕ್ಷಿಣೆ ಮಾಡುವ ಸಂಪ್ರದಾಯವಿದೆ.

ಧೂಪದ ಕುಂಡದ ಪಕ್ಕದಲ್ಲಿರುವ ಗಾಳಿ ಬಸವನ ಗುಡಿ ಎಂಬ ಹೆಸರಿನ ಸಣ್ಣದೇವಾಲಯವಿದೆ. ಈ ಗುಡಿಯ ಹಿಂದೆ ೩ ಅಡಿಯ ಸ್ಥೂಪವಿದೆ. ಅದನ್ನು ಪೀಠ ಎನ್ನುತ್ತಾರೆ. ಭಕ್ತರು ಎರಡು ಕೈ ಹೆಬ್ಬೆರಡಳನ್ನು ಆ ಪೀಠದ ಮೇಲೆ ಒತ್ತಿ ಈ ಪೀಠದೆದುರು ನಿಂತು, ಮಾದೇಶ್ವರನ ಲಿಂಗವನ್ನು ನೋಡಲು ಒಂದು ಚಿಕ್ಕ ಕಿಂಡಿ ಇದೆ. ಈ ಕಿಂಡಿಯಲ್ಲಿ ನೋಡುತ್ತಾ ಕೂಡಿದ ಹೆಬ್ಬೆರಳುಗಳು ಇಷ್ಟಾರ್ಥ ಫಲಿತವಾದರೆ ಬಿಡಿಸಿಕೊಳ್ಳುತ್ತವೆ. ಅಂಗೈ ಜಾರುತ್ತದೆ. ಈ ನಂಬಿಕೆ ಇಂದಿಗೂ ಕೂಡ ಇದೆ. ಈ ಪೀಠದ ಬಳಿ ಇರುವ ಬಸವನೇ ಗಾಳಿ ಬಸವಣ್ಣ ಏಕೆಂದರೆ ದೆವ್ವ ಹಿಡಿದವರು ಬಂದರೆ ಆವೇಶ ಬರುವುದಲ್ಲದೆ ಬಿಟ್ಟು ಹೊರಟು ಹೋಗುತ್ತದೆ ಎಂಬ ನಂಬಿಕೆ ಇದೆ. ಆದ್ದರಿಂದ ಇದಕ್ಕೆ ಗಾಳಿ ಬಸವಣ್ಣನೆಂಬ ಹೆಸರು ಇದೆ.

**ಹರಕೆ ಹೊರವುದು**

ತಮ್ಮ ಕಷ್ಟಗಳು ಪರಿಹಾರವಾದರೆ ಇಂತಿಂತ ಸೇವೆ ಮಾಡುತ್ತೇವೆ ಎಂದು ಹರಕೆ ಹೊರುತ್ತಾರೆ. ತಮಿಳುನಾಡಿನ ಪರಿಸೆ ಕನ್ನಡಿಗರಿಗಿಂತಲೂ ಹೆಚ್ಚು ನಂಬಿಕೆ, ಭಕ್ತಿ, ಶ್ರದ್ಧೆಗಳನ್ನು ಇಟ್ಟುಕೊಂಡಿದ್ದಾರೆ. ಮಾದೇವನ ಉತ್ಸವ ನಡೆಯುತ್ತಿದ್ದರೆ ರಥದ ಮೇಲೆ ಬೊಕ್ಕಸೆ, ಬೊಕ್ಕಸೆ ಹಣವನ್ನು ಎರಚುತ್ತಾರೆ. ಕೆಲವರು ವೀಳೆದೆಲೆಯನ್ನು ಕಟ್ಟು ಕಟ್ಟುಗಟ್ಟಲೇ ಎಸೆಯುತ್ತಾರೆ. ಬೆಳೆದ ದವಸ ದಾನ್ಯಗಳು ತಂದು ಎಸೆಯುತ್ತಾರೆ. ಬೆಳೆದ ದವಸ ದಾನ್ಯಗಳು ತಂದು ಎರಚುತ್ತಾರೆ. ವಿಶೇಷ ಹರಕೆಯನ್ನು ಹೊರುತ್ತಾರೆ. ಗೋಲಿ ಗಾತ್ರದ ಹಿಟ್ಟಿನ ಮುದ್ದೆಗಳನ್ನು ಎರಚುವುದು, ಆಡು, ದನ, ಕುರಿ, ಮೇಕೆಗಳನ್ನು ಮಾದಪ್ಪನ ಸನ್ನಿಧಿಗೆ ಒಪ್ಪಿಸುತ್ತಾರೆ. ಇವುಗಳನ್ನು ಹರಾಜು ಹಾಕಿ ಹಣವನ್ನು ದೇವಾಲಯಕ್ಕೆ ಸಂದಾಯವಾಗುತ್ತದೆ. 'ತಿಂಗಳುಸೇವೆ' ಎಂಬ ಹರಕೆಯನ್ನು ಹೊರುತ್ತಾರೆ.

ಇನ್ನೊಂದು ಬಡವರಿಗೆ ಹರಕೆ ಹೊರುವುದು. ಧೂಪದ ಸೇವೆ, ಮತ್ತೆ ಕೆಲವರು ಎಳ್ಳನ್ನು ಸುರಿಯುವುದು, ಹೆಜ್ಜೆ ನಮಸ್ಕಾರ, ಕೊಳದಲ್ಲಿ ಮಿಂದು ಹೆಜ್ಜೆಗೊಂದು ಸಲ ನಮಸ್ಕಾರ ಮಾಡುವುದು, ಅಡ್ಡ ಬೀಳುವ ಹರಕೆ.

**ಮಂಟೇಸ್ವಾಮಿ ಕಾವ್ಯದಲ್ಲಿ ಭಕ್ತಿ ಮತ್ತು ನಂಬಿಕೆ**

**ನೀಲಗಾರರು:** ದಕ್ಷಿಣ ಕರ್ನಾಟಕದ ದಕ್ಷಿಣ ಭಾಗದಲ್ಲಿ ಪ್ರಮುಖವಾಗಿ ಕಂಡುಬರುವ ಧಾರ್ಮಿಕ ವೃತ್ತಿಗಾಯಕರು ಮಂಟೇಸ್ವಾಮಿಯ ಶಿಷ್ಯರಾದ ಚಿಕ್ಕಲ್ಲೂರು ಸಿದ್ದಪ್ಪಾಜಿ, ಕಪ್ಪಡಿ ರಾಚಪ್ಪಾಜಿ ಮತ್ತು ಮಳವಳ್ಳಿ ಹಾಗೂ ಬೊಪ್ಪಗೌಡನಪುರದ ಅರಸು ಮನೆತನದ ಸ್ವಾಮಿಗಳ ಮಹಿಮೆಯ ಪ್ರಸಾರಕ್ಕೆ ಮೀಸಲಾದ ವಿಶಿಷ್ಟ ಭಕ್ತರು ಇವರನ್ನು ಲೀಲೆಗಾರರು ಎಂದು ಕರೆಯಲಾಗುತ್ತದೆ. ಇವರು ವೇಷಭೂಷಣಗಳು ವಿಶಿಷ್ಟವಾದವು. ತಲೆಯಲ್ಲಿ ಕೆಂಪುರುಮಾಲು, ಕರಿಯ ಮೇಲಂಗಿ, ಮಂಡಿಯಿಂದ ತುಸು ಕೆಳಗೆ ಚಾಚಿರುವ ಕಚ್ಚೆಯ ಪಂಚೆ ಕೈಯಲ್ಲಿ ನಾಗರಹೆಡೆಯ ಅಥವಾ ಸಿಂಹ ಮುಖದ ಕರಿಯ ತಂಬೂರಿ, ಹೆಬ್ಬೆರಳಲ್ಲಿ ಎರಡು ಗಗ್ಗರಗಳು ಹಣೆಯಲ್ಲಿ ಭಸ್ಮ ಜೊತೆಗೆ ಕುಂಕುಮದ ತಿಲಕ ಕೊರಳಲ್ಲಿ ಮೂರು ರುದ್ರಾಕ್ಷಿ ಧರಿಸಿರುತ್ತಾರೆ.[೧]

ಇವರು ಹಾಡುವ ಮುಖ್ಯ ಧಾರ್ಮಿಕ ಕಥೆಗಳೆಂದರೆ ಮಂಟೇಸ್ವಾಮಿ ಕಥೆಯನ್ನು ಹೇಳುತ್ತಾರೆ. ಹಾಡುವಾಗ ಸಿದ್ಧಯ್ಯ ಶಿವನೇ ಬನ್ನಿ ಪರಂಜ್ಯೋತಿ ಮಂಟೇದ ಲಿಂಗಯ್ಯ ನೀವೇ ಬನ್ನಿ ಎಂದು ಸೊಲ್ಲು ಸೊಲ್ಲಗೂ ಗುರು ಸಿದ್ಧಪ್ಪಾಜಿ–ಯವರನ್ನು ನೆನೆಯುತ್ತಾರೆ. ತಂಬೂರಿಯನ್ನು ನುಡಿಸುತ್ತಾರೆ. ಹಿಮ್ಮೇಳದವರು ಚಿಟಗೆ ಏಕತಾರಿಗಳನ್ನು ನುಡಿಸುತ್ತಾರೆ.

ಜನರು ಇವರನ್ನು ಯಾರಾದರೂ ಸತ್ತ ನಂತರ ತಿಥಿ ಕಾರ್ಯಗಳನ್ನು ಮಾಡುವಾಗ ಈ ಸಿದ್ದಪ್ಪಾಜಿಯ ಕಥೆಯನ್ನು ಹೇಳಿಸುತ್ತಾರೆ. ಹಾಗೆಯೇ ಹೊಸ ಮನೆಗಳಿಗೆ ಹೋಗುವಾಗ ಮತ್ತು ಹಬ್ಬ–ಹರಿದಿನಗಳಲ್ಲಿ ಶಿವರಾತ್ರಿಯಂದು ಜಾತ್ರೆಗಳಲ್ಲಿ, ವಿಶೇಷ ದಿನಗಳಲ್ಲಿ ಮಂಟೇಸ್ವಾಮಿ ಕಥೆಯನ್ನು ಹೇಳಿಸುವುದು ವಾಡಿಕೆಯಾಗಿದೆ. ಭಕ್ತಿಯಿಂದ ಇಂತಹ ಕಥೆಯನ್ನು ಹೇಳಿಸುವುದರಿಂದ ಜನರು ನೆಮ್ಮದಿಯಿಂದ ಬದುಕಲು ಸಾಧ್ಯ ಎಂಬ ನಂಬಿಕೆ ಇದೆ.

**ಚಿಕ್ಕಲ್ಲೂರು ಮತ್ತು ಕಪ್ಪಡಿ ಜಾತ್ರೆಗಳು**

ಚಿಕ್ಕಲ್ಲೂರು ಕೊಳ್ಳೇಗಾಲದಿಂದ ಸುಮಾರು ೫೦ ಕಿ.ಮೀ. ದೂರದಲ್ಲಿದ್ದು ಇಲ್ಲಿ ಸಿದ್ದಪ್ಪಾಜಿಯ ದೇವಾಲಯವಿದೆ. ಈ ಊರಿನಲ್ಲಿ ವರ್ಷಕ್ಕೆ ಒಂದು ಭಾರಿ ಜಾತ್ರೆ

೧. ಕನ್ನಡ ವಿಷಯ ವಿಶ್ವಕೋಶ – ಜಾನಪದ, ಮೈಸೂರು ವಿಶ್ವವಿದ್ಯಾನಿಲಯ

ನಡೆಯುತ್ತದೆ. ಈ ಜಾತ್ರೆಯ ವಿಶೇಷವೇನೆಂದರೆ ಚಂದ್ರಮಂಡಲ ಮಾಡುವುದು ಅಂದರೆ ರಥದ ರೀತಿ ಬಿದಿರುಗಳುಗಳಿಂದ ಕಟ್ಟಿ ಅದಕ್ಕೆ ಪೂಜೆ ಪುನಸ್ಕಾರಗಳನ್ನು ಮಾಡಿ ಅಲ್ಲಿ ಹುಣ್ಣಿಮೆಯ ರಾತ್ರಿಯಂದು ಸುಮಾರು ೧೨ ಗಂಟೆಯ ವೇಳೆಗೆ ಬೆಂಕಿ ಹಚ್ಚುತ್ತಾರೆ. ಆ ಬೆಂಕಿಯ ಉರಿಯ ಜ್ವಾಲೆ ಯಾವ ಕಡೆಗೆ ವಾಲುತ್ತದೆಯೋ ಆ ಊರುಗಳಲ್ಲಿ ಸಮೃದ್ಧಿಯಾಗಿ ಬೆಳೆ, ಜನರು ಸುಖ-ಸಂತೋಷದಿಂದಿರುತ್ತಾರೆ ಎಂಬ ನಂಬಿಕೆ ಇಂದಿಗೂ ಕೂಡ ಇದೆ. ಈ ಜಾತ್ರೆ ಚಳಿಗಾಲದ ಅವಧಿಯಲ್ಲಿ ಒಂದು ವಾರದವರೆಗೆ ನಡೆಯುತ್ತದೆ, ಈ ಜಾತ್ರೆಗೆ ಪ್ರತಿ ಹಳ್ಳಿಯಿಂದಲೂ ಜನರು ಬರುತ್ತಾರೆ. ಹರಕೆಗಳನ್ನು ಸಲ್ಲಿಸುತ್ತಾರೆ, ಬುರುಡೆ ಮಾಡಿಸಿಕೊಳ್ಳುವುದು, ಹೆಜ್ಜೆ ನಮಸ್ಕಾರ ಮಾಡುವುದು ಮತ್ತು ಎಲ್ಲಾ ಸಿದ್ದಪ್ಪಾಜಿಯ ದೇವರ ಗುಡ್ಡರು ಇಲ್ಲಿಗೆ ಕಡ್ಡಾಯವಾಗಿ ಬರುತ್ತಾರೆ ಅವರು ತಮ್ಮ ಜಾಗಟೆ, ನಾಗಬೆತ್ತವನ್ನು ತಂದು ಪೂಜೆಸಲ್ಲಿಸುತ್ತಾರೆ.

ಈ ಜಾತ್ರೆಯಲ್ಲಿ 'ಭಂಗೀಸೇವೆ' ಎಂಬುದನ್ನು ಮಾಡುತ್ತಾರೆ. ಕುರಿಗಳನ್ನು, ಮೇಕೆ, ಕೋಳಿಗಳನ್ನು ಬಲಿಕೊಡುತ್ತಾರೆ. ಮಾಂಸವನ್ನು ಬೇಯಿಸಿ ಪೂಜೆ ಮಾಡಿ ದೇವರಿಗೆ ಎಡೆಯನ್ನು ಹಾಕುವ ಪದ್ಧತಿ ಇದೆ. ಎಲ್ಲಾ ದೇವರಗುಡ್ಡರು ತಮ್ಮ ಬಿರುದುಗಳನ್ನು ಪೂಜಿಸಿ ಮಾಂಸ, ಮಧ್ಯಪಾನ, ಭಂಗಿಗಳನ್ನು ಸೇದುತ್ತಾರೆ. ಇದನ್ನೇ ಭಂಗೀ ಸೇವೆ ಎಂದು ಕರೆಯುತ್ತಾರೆ. ಹರಕೆ ಕಟ್ಟಿಕೊಂಡ ಜನರು ಕುರಿ, ಕೋಳಿ, ಮೇಕೆಗಳನ್ನು ಚಿಕ್ಕಲ್ಲೂರಯ್ಯನ ಹೆಸರಲ್ಲಿ ಬಿಡುತ್ತಾರೆ. ಹೀಗೆ ಈ ಜಾತ್ರೆಯಲ್ಲಿ ಜನರು ಅನೇಕ ಹರಕೆಗಳನ್ನು ಸಲ್ಲಿಸುವ ಪದ್ಧತಿ ಇಂದಿಗೂ ಇದೆ.

ಕಪ್ಪಡಿ ಜಾತ್ರೆಯೂ ಕೂಡ ಒಂದು ವಾರದ ಜಾತ್ರೆಯಾಗಿದ್ದು, ಇದು ಕೂಡ ಒಂದು ಪುಣ್ಯಕ್ಷೇತ್ರವಾಗಿದೆ. ಮಂಡ್ಯ ಜಿಲ್ಲೆಯಲ್ಲಿ ಬರುವ ಒಂದು ಊರಾಗಿದೆ. ಇಲ್ಲಿ ಪ್ರತಿವರ್ಷ ಒಂದು ಭಾರಿ ಜಾತ್ರೆ ನಡೆಯುತ್ತದೆ. ಯುಗಾದಿ ಹಬ್ಬದ ೮ ದಿನಗಳ ಹಿಂದೆ ಈ ಜಾತ್ರೆಯು ಪ್ರಾರಂಭ ವಾಗುತ್ತದೆ. ಇಲ್ಲಿ ರಾಚಪ್ಪಾಜಿಯ ಉರಿಗದ್ದಿಗೆ ಇದೆ. ಇಲ್ಲೂ ಕೂಡ ಜನರು ತಮ್ಮ ಮಂಡೆಯನ್ನು ಬೋಳಿಸಿಕೊಳ್ಳುವುದನ್ನು ಕಾಣುತ್ತೇವೆ, ಜನರು ಹಲವಾರು ಹರಕೆಗಳನ್ನು ಹೊತ್ತು ಸೇವೆಯನ್ನು ಸಲ್ಲಿಸುತ್ತಾರೆ.

ಈ ಜಾತ್ರೆಯಲ್ಲಿಯೂ ಕೂಡ ರಾಚಪ್ಪಾಜಿಯ ಉರಿಗದ್ದಿಗೆ ಇದೆ ಈ ಉರಿಗದ್ದಿಗೆಯ ಮೇಲೆ ಕಪ್ಪಡಿಯ ಸ್ವಾಮಿಗಳು ಆ ಜಾತ್ರೆಯ ದಿನ ಪವಡಿಸುತ್ತಾರೆ. ಅದೇ ವಿಶೇಷವಾಗಿದೆ.

ಈ ಜಾತ್ರೆಯಲ್ಲಿಯೂ ಕೂಡ ಸಿದ್ಧಪ್ಪಾಜಿಯ ಭಕ್ತರು ಅಂದರೆ ದೇವರಗುಡ್ಡರು ಪ್ರತಿಯೊಬ್ಬರು ಇಲ್ಲಿಗೆ ಬರುತ್ತಾರೆ. ಈ ಜಾತ್ರೆಯಲ್ಲಿ ಕುರಿ, ಮೇಕೆ, ಕೋಳಿಗಳನ್ನು ಬಲಿಕೊಡುವ ಪದ್ಧತಿ ಇದೆ. ಹರಕೆ ಹೊತ್ತುಕೊಂಡು ಜನರು ಕುರಿ, ಮೇಕೆಗಳನ್ನು ದೇವರ ಹೆಸರಲ್ಲಿ ಬಿಡುತ್ತಾರೆ. ಹೀಗೆ ಎಲ್ಲಾ ರೀತಿಯ ಭಕ್ಷ್ಯಗಳನ್ನು ಮಾಡಿ

ದೇವರಗುಡ್ಡದಿಂದ ಪೂಜೆ ಮಾಡಿಸಿ ರಾಚಪ್ಪಾಜಿ ಮತ್ತು ಸಿದ್ಧಪ್ಪಾಜಿಗೆ ಎಡೆಯನ್ನು ಹಾಕುತ್ತಾರೆ. ಈ ಪದ್ಧತಿ ಇಂದಿಗೂ ಕೂಡ ಪ್ರಸ್ತುತವಾಗಿದೆ ಮತ್ತು ಕಪ್ಪಡಿಯಲ್ಲಿಗೆ ಹೋದವರು ಬೊಪ್ಪೇಗೌಡನಪುರದ ಮಠವನ್ನು ನುಗ್ಗದೆ ಬರಬಾರದೆಂಬ ನಂಬಿಕೆ ಜನರಲ್ಲಿ ಇದೆ. ಈ ಕಾರಣದಿಂದ ಕಪ್ಪಡಿಯ ಜಾತ್ರೆಗೆ ಹೋದ ಜನರು ಬೊಪ್ಪೇಗೌಡನಪುರದ ಮಠಕ್ಕೆ ಹೋಗಿ ಬರುವ ಸಂಪ್ರದಾಯ ಇಂದಿಗೂ ಪ್ರಸ್ತುತದಲ್ಲಿದೆ. ಸಾಮಾನ್ಯ ಜನರು ಕೂಡ ಈ ಪದ್ಧತಿಯನ್ನು ಅನುಸರಿಸುತ್ತಾರೆ.

**ಸಿದ್ಧಪ್ಪಾಜಿಯ ಪವಾಡಗಳು**

ಮಂಟೇಸ್ವಾಮಿ ಕಲಿಯುಗದ ಅವತಾರಗಳನ್ನು ನೋಡಲಾರದೆ ಪಾತಾಳ ಭಾವಿಯಲ್ಲಿ ಪವಡಿಸಲು ಮಂಟೇಸ್ವಾಮಿ ನಿರ್ಧರಿಸುತ್ತಾರೆ. ಬಾವಿಯ ಸಿದ್ಧತೆಗೆ ಸಲಕರಣೆಗಳು ಬೇಕು ಎಂದಾಗ ಸಿದ್ಧಪ್ಪಾಜಿ ಹಲಗೂರಿಗೆ ಹೊರಡುತ್ತಾರೆ. ಹಲಗೂರಿನಲ್ಲಿ ೭೦೦ ಒಕ್ಕಲು ಹಲಗೂರಲ್ಲಿ ೭ ಮಂದಿ ಪಾಂಚಾಳರು ಇರುತ್ತಾರೆ. ಸಿದ್ಧಪ್ಪಾಜಿ ಹಲಗೂರಲ್ಲಿ 'ಕ್ವಾರಣ್ಯ' ಸಾರುತ್ತಾರೆ ಯಾರೂ ಲಕ್ಷಿಸುವುದಿಲ್ಲ. ಪಾಂಚಾಳರು ಕೂಡ ಗಮನಿಸಲಿಲ್ಲ. ಆ ಊರಲ್ಲಿ ಯಾರೂ ಇವರನ್ನು ಮಾತಾಡಿಸುವುದಿಲ್ಲ. ಕಡೆಯ ಬೀದಿಯ ಒಬ್ಬ ಮುದುಕ ಏನು ಬೇಕು ಪರದೇಶಿ ಎಂದು ಕೇಳುತ್ತಾನೆ. ಕಬ್ಬಿಣದ ಭಿಕ್ಷೆ ಬೇಕೆನಲು, ಕಬ್ಬಿಣ ಎಂದರೆ ನಮಗೆ ಕರಿಯ ಚಿನ್ನ ಕಾಣೋ ಎಂದು ಏಳುಮಂದಿ ಧಣಿಗಳ ಅಪ್ಪಣೆ ಇಲ್ಲದೆ ಕಬ್ಬಿಣ ಕೊಡಲು ಒಪ್ಪುವುದಿಲ್ಲ. ೭ ಮಂದಿ ಪಾಂಚಾಳರನ್ನೇ ಭಿಕ್ಷೆ ಬೇಡುತ್ತಾನೆ. "ಈ ಭೂಲೋಕದಲ್ಲಿರುವ ದೇವರೆಲ್ಲ ನಮಗೆ ಮಕ್ಕಳಾಗವೆ"[೧] ಅಸಡ್ಡೆಯಿಂದ ಮಾತಾಡಿ ಪಾಂಚಾಳರು ಹೆಗ್ಗುಲುಮೆಗೆ ಸಿದ್ದಪ್ಪಾಜಿಯನ್ನು ಕರೆತರುತ್ತಾರೆ. ನೇಗಿಲ ತುಂಡಿನ ಗಾತ್ರದ ಕೆಂಪಗೆ ಕಾಯ್ದ ಕಬ್ಬಿಣವನ್ನು ಕೊಂಗಿಕ್ಕಳದಲ್ಲಿ ತಂದು ಕ್ವಾರಣ್ಯ ನೀಡುತ್ತಾರೆ. ಸಿದ್ದಪ್ಪಾಜಿ ಆ ಕೆಂಡದಂತಹ ಕಬ್ಬಿಣವನ್ನು ಜೋಳಿಗೆಯಲ್ಲಿ ಇರಿಸುತ್ತಾರೆ.

ಇದಕ್ಕೂ ಬಗ್ಗದ ಸಿದ್ಧಪ್ಪಾಜಿಯನ್ನು ಪಾಂಚಾಳರು ಕಾದ ಗಟ್ಟಿಯ ಮೇಲೆ ಕೂರಿಸಲು ಒಪ್ಪಿಸುತ್ತಾರೆ. ಇದರ ೯ರಷ್ಟು ಭಾಗ ಕಬ್ಬಿಣ ಕೊಡುತ್ತೇವೆ ಎನ್ನುತ್ತಾರೆ. ಅದರಿಂದಲೂ ಜಯವನ್ನು ಪಡೆಯುತ್ತಾರೆ. ಆನೆ ಗಾತ್ರದ ಕಾದ ಗಟ್ಟಿಯ ಮೇಲೆ ಏರಬೇಕೆಂದು ಪಂಥ ಹೂಡುತ್ತಾರೆ. ಹಾಗೆ ಅವರು ಏರಿದಾಗ ಆ ಬೆಂಕಿಗೆ ಏಳುನೂರು ಖಂಡುಗ ಬಿದಿರು ಇದ್ದಿಲು ಹಾಕಿ ಆಡಿನ ಚರ್ಮದ ತಿದಿಯ ಬದಲು ೨೪ ಕೋಣನ ತಿದಿ ಮಾಡಿ ಊರ ಮೂಡಲ ದಿಕ್ಕಿನಲ್ಲಿ ಕಣದಗಲ ತಿದಿ ಮಾಡಿಕೊಂಡು ೭೦೦ ಒಕ್ಕಲು ತಿದಿಯನ್ನು ಒತ್ತುತ್ತಾರೆ. ಇದರಿಂದ ಸಿದ್ಧಪ್ಪಾಜಿ

೧. ಮಂಟೇಸ್ವಾಮಿ ಕಾವ್ಯ, ಚಂದ್ರಕಾಳೇನಹಳ್ಳಿ, ಪು. ೫೭

ಬೂದಿಯಾಗುತ್ತಾರೆಂದು ಭಾವಿಸಿದ್ದರು. ಆದರೆ "ನನಗಿನ್ನೂ ನಿದ್ರೆ ಜೊಂಪು ಹತ್ತಿಲ್ಲ ತಿದಿಕೈಯ ನಿಲ್ಲಿಸಬೇಡಿ" ಎಂದು ಸಿದ್ದಪ್ಪಾಜಿ ಹೇಳಿದಾಗ ಅವರು ಬೆರಗಾಗುತ್ತಾರೆ. ಈ ಪವಾಡವನ್ನು ಗೆಲ್ಲುತ್ತಾರೆ.

ಇಷ್ಟಾದರೂ ಪಾಂಚಾಳರು ಕಬ್ಬಿಣದ ಭಿಕ್ಷೆಯನ್ನು ದಾನ ಕೊಡಲು ಒಪ್ಪುವುದಿಲ್ಲ. ಕಾದ ಕೊಪ್ಪರಿಗೆಯಲ್ಲಿ ಹನ್ನೆರಡು ದಿನ ಮಲಗಿಸುತ್ತಾರೆ. ಅವರಿಗೆ ಅದು ತಣ್ಣೀರಂತೆ ಬಾಸವಾಗುತ್ತದೆ. ಇದರಿಂದಲೂ ಸಿದ್ಧಪ್ಪಾಜಿ ಗೆಲ್ಲುತ್ತಾರೆ.

ಸಾವಿರ ವರಹದ ಕೀಲು ಕುದುರೆ ಮಾಡಿ ಮೈಮೇಲೆ ಕೀಲು ಕೀಲಿಗೆ ಸೂಜಿ ದಬ್ಬಳ, ಕತ್ತಿ, ಚೂರಿಗಳನ್ನು ಚುಚ್ಚಿ ಚೆನ್ನಾಗಿ ಕಾಯಿಸುತ್ತಾರೆ. ಅದರ ಮೇಲೆ ಕುಳಿತು ಈ ಏಳುಲೋಕ ವನ್ನೆಲ್ಲಾ ಸುತ್ತಿ ಬರುತ್ತಾರೆ. ಇದರಿಂದ ಸಿದ್ದಪ್ಪಾಜಿ ಎಂತಹ ಪವಾಡ ಪುರುಷರಾಗಿದ್ದರು ಎಂಬುದು ತಿಳಿದುಬರುತ್ತದೆ. ಜನರಲ್ಲಿ ಈ ಸಿದ್ದಪ್ಪಾಜಿಯ ಮೇಲೆ ಹೆಚ್ಚಿನ ಭಕ್ತಿ ಉಂಟಾಗಲು ಕಾರಣವಾಗುತ್ತದೆ.

ನಂತರ ಹನ್ನೆರಡು ಖಂಡುಗ ಮೆಣಸಿನಕಾಯಿ, ಹನ್ನೆರಡು ಖಂಡುಗ ಸುಣ್ಣ, ಕಳ್ಳಿಹಾಲು, ಎಕ್ಕದ ಹಾಲು ಇಲಿಯಗುಳಿಗಳನ್ನು ಮಾಡಿಸಿ ಸಿದ್ದಪ್ಪಾಜಿಯನ್ನು ಒಳಗೆ ಮುಚ್ಚಿ ಏಳು ದಿನಗಳು ಪರೀಕ್ಷಿಸಿದರು ಆದರೂ ಸಿದ್ದಪ್ಪಾಜಿ ಜಯಶೀಲರಾಗುತ್ತಾರೆ. ಕಾರಣ ಸಿದ್ಧಪ್ಪಾಜಿ ಮಂಟೇದ ಲಿಂಗಯ್ಯನ ಪರಮಭಕ್ತ ಹಾಗೂ ಪವಾಡಪುರುಷ ಯೋಗಿಯಾಗಿದ್ದರು.

ಈ ರೀತಿಯ ಎಲ್ಲಾ ಪರೀಕ್ಷೆಗಳಿಂದ ಜಯಶೀಲನಾಗುತ್ತಾನೆ. ಇದರಿಂದ ಜನರಲ್ಲಿ ಇವನು ಸಮಾನ್ಯನಲ್ಲ ದೇವತಾಮನುಷ್ಯನ, ಕಾರಣೀಪುರುಷ ಎಂಬ ನಂಬಿಕೆ ಇದೆ. ಇದರಿಂದ ಸಿದ್ದಪ್ಪಾಜಿಯ ಗದ್ದುಗೆಗಳನ್ನು ಹಳ್ಳಿ ಹಳ್ಳಿಗಳಲ್ಲೂ ಸ್ಥಾಪಿಸಿದ್ದಾರೆ. ಜಾತ್ರೆಗಳು, ಹಬ್ಬಗಳ ಸಂದರ್ಭದಲ್ಲಿ ಸಿದ್ದಪ್ಪಾಜಿಯ ಕಥೆಯನ್ನು ಹೇಳಿಸುವುದು ವಾಡಿಕೆಯಾಗಿದೆ. ಭಂಗೀಸೇವೆಗಳನ್ನು ಊರುಗಳಲ್ಲಿ ಮತ್ತು ಗ್ರಾಮಗಳಲ್ಲಿ ಮಾಡುತ್ತಾರೆ.

**ಜುಂಜಪ್ಪನ ಕಾವ್ಯದಲ್ಲಿ ಭಕ್ತಿ ಮತ್ತು ನಂಬಿಕೆಗಳು**

**'ಗಣೆ'ಯವರು:** ಕಾಡುಗೊಲ್ಲರಲ್ಲಿ ಜುಂಜಪ್ಪನ ಕಾವ್ಯವನ್ನು ಹಾಡುವ ಕಲಾವಿದರಿಗೆ ಗಣೆಯವರು ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿ ಹಾಡುವ ವೃತ್ತಿ ಗಾಯಕರಂತೆ ಇವರು ಕೂಡ ಗಣೆಯನ್ನು ನುಡಿಸುತ್ತಾ ಹಾಡುತ್ತಾರೆ. 'ಗಣೆ' ಎಂದರೆ ಸುಮಾರು ನಾಲ್ಕು ಅಡಿ ಉದ್ದದ ಬಿದಿರಿನ 'ಗಳು' ಇದಕ್ಕೆ ಒಂದು ತುದಿಯಲ್ಲಿ ಕೊಳಲಿನಂತೆ ಊದುವ ಹಾಗೂ ನುಡಿಸುವ ಐದು ಸಣ್ಣ ರಂಧ್ರಗಳಿರುತ್ತವೆ. ಇದು ಕೊಳಲಿನ ಮಾದರಿಯಲ್ಲಿಯೇ ಇದೆ. ಇದು ಗೊಲ್ಲರಿಗೆ ಬಹು ಉಪಯೋಗವಾಗುತ್ತದೆ. ಊರಿನಡೆಯಲು ಊರುಗೋಲು ನುಡಿಸಲು ಗಣೆ, ದನಕುರಿ ಹೊಡೆಯಲು ಕೋಲು

ಹಾಗೂ ಬೀಸುವ ದೊಣ್ಣೆಯಾಗಿ ಬುತ್ತಿಗೊಡೆ ಕಟ್ಟಿ ಹೆಗಲ ಮೇಲೆ ಇರಿಸಿ ಹೊರುವ ಸಾಧನವಾಗಿದೆ.

ಸಾಮಾನ್ಯವಾಗಿ ಜುಂಜಪ್ಪನ ಕಾವ್ಯವನ್ನು ಇಬ್ಬರು ಇಲ್ಲವೇ ಮೂವರು ಮಾತ್ರ ಹಾಡುತ್ತಾರೆ. ಇವರಲ್ಲಿ 'ಗಣೆ' ಊದುವವರಾಗಿದ್ದು, ಹಿಮ್ಮೇಳಕ್ಕೆ ಬೇರೆಯವರು ದನಿ ನೀಡುವ ಅವಶ್ಯಕತೆ ಇಲ್ಲ. ಈ ಸಂದರ್ಭದಲ್ಲಿ ತಾಳವಾದ್ಯಗಳನ್ನು ಬಳಸುವುದಿಲ್ಲ. ಕಾವ್ಯವನ್ನು ಹಾಡುವವರು ಮತ್ತು ಗಣೆ ನುಡಿಸುವವರು ಎದುರುಬದುರಾಗಿ ಕುಳಿತು ಹಾಡುತ್ತಾರೆ. ಹಾಡುವ ಕಲಾವಿದ ಗಣೆಯ ದನಿಗೆ ದನಿಗೂಡಿಸಿ ಹಾಡುತ್ತಾನೆ. ಗದ್ಯ ರೂಪದಲ್ಲೂ ಮತ್ತು ಗದ್ಯಪದ್ಯರೂಪ ಎರಡರಲ್ಲೂ ಹಾಡುವವರಿದ್ದಾರೆ. ಹೆಣ್ಣು ಮಕ್ಕಳೂ ಹಾಡುತ್ತಾರೆ. ಇದು ತ್ರಿಪದಿಗಳ ರೂಪದಲ್ಲಿ ಹಾಡುತ್ತಾರೆ. ಗೊಲ್ಲರ ಹಟ್ಟಿಗಳಲ್ಲಿ ಜುಂಜಪ್ಪನ ಕಾವ್ಯವನ್ನು ಹಾಡಿಸುತ್ತಾರೆ.

ಕಾಡುಗೊಲ್ಲರು ಹಟ್ಟಿಗಳಲ್ಲಿ ಇಂದಿಗೂ ಸಹ ವಿಶೇಷ ದಿನಗಳಲ್ಲಿ ಗಣೆಯವರಿಂದ ಸುತ್ತಮುತ್ತ ಪ್ರದೇಶದ ಹಟ್ಟಿಯ ಜನರು ಹಾಡಿಸುವ ಪದ್ಧತಿ ಇದೆ.

**ಜುಂಜಪ್ಪನ ಜಾತ್ರೆ**

ಜುಂಜಪ್ಪನ ಜಾತ್ರೆ ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿ ಮತ್ತು ಸಿರಾ ತಾಲ್ಲೂಕಿನ ಬೇವಿನಹಳ್ಳಿಯಲ್ಲಿ (ಬೇವಿನಹಳ್ಳಿಯಿಂದ ೩ ಕಿ.ಮೀ. ದೂರದಲ್ಲಿ ಕಳುವಾರಹಳ್ಳಿ ಬಳಿಯ ಜುಂಜಪ್ಪನ ಸಮಾಧಿ ಇರುವ ಜಾಗದಲ್ಲಿ) ನಡೆಯುತ್ತದೆ. ಈ ಜಾತ್ರೆಯ ವಿಶೇಷತೆ ಎಂದರೆ ದೇವರಿಗೆ ಗಂಗಾಸ್ನಾನ ಮಾಡಿಸುವುದು, ಹಾಲು ಮೀಸಲು ಕರೆಯುವುದು, ದೀಪ ಏರಿಸುವುದು, ಹರಕೆಗಳನ್ನು ತೀರಿಸುವುದು, ದೀಪಾವಳಿಯ ಸಂದರ್ಭದಲ್ಲಿ ನಡೆಯುವ ಜಾತ್ರೆಗಳಲ್ಲಿ ಭಕ್ತರು, ಕುರಿ, ಎಮ್ಮೆ, ಹಸು, ಮೇಕೆ ಇವುಗಳ ಹಾಲು ಕರೆದು, ಅದನ್ನು ಕಾಯಿಸಿ, ಹೆಪ್ಪುಹಾಕಿ, ಮೊಸರು ಮಾಡಿ, ಬೆಣ್ಣೆ ತೆಗೆದು ಬೆಣ್ಣೆಯಿಂದ ತುಪ್ಪಮಾಡಿ ಆ ತುಪ್ಪವನ್ನು ಗಡಿಗೆಗಳಲ್ಲಿ ಸಂಗ್ರಹಿಸಿಡುತ್ತಾರೆ. ಜಾತ್ರೆಯಲ್ಲಿ ದೇವಸ್ಥಾನದ ಮುಂಭಾಗದಲ್ಲಿ ಆರೇಳು ಅಡಿಗಳಷ್ಟು ಎತ್ತರವಾಗಿರುವ ೩ ಅಡಿಗಳಷ್ಟು ಸುತ್ತಳತೆ ಇರುವ, ಕಲಾತ್ಮಕವಾಗಿ ಮಾಡಿರುವ ದೀಪದ ಕಂಬವನ್ನು ನಿಲ್ಲಿಸಿ ಅದಕ್ಕೆ ಎಣ್ಣೆ ಬತ್ತಿ ಹಾಕಿರುತ್ತಾರೆ.

ಪ್ರತಿಯೊಬ್ಬ ಭಕ್ತನೂ ತಾವು ತಂದ ಮೀಸಲು ತುಪ್ಪವನ್ನು ಈ ದೀಪದ ಕಂಬಕ್ಕೆ ಹಾಕುತ್ತಾರೆ. ಹೀಗೆ ದೀಪ ಹಚ್ಚುವ ಈ ಹಬ್ಬವನ್ನು 'ಹಿರೀದೀವಣಿಗೆ' ಎಂದು ಕರೆಯುತ್ತಾರೆ. ಒಂದು ತಿಂಗಳವರೆಗೂ ಈ ದೀಪವನ್ನು ನಿರಂತರವಾಗಿ ಉರಿಸಿ ಕೊನೆಯ ದಿನ ಪುನಃ ಚಿಕ್ಕ ಪ್ರಮಾಣದಲ್ಲಿ ಜಾತ್ರೆಯನ್ನು ನಡೆಸುತ್ತಾರೆ ಇದನ್ನು 'ಕಿರುದೀವಣಿಗೆ' ಎಂದು ಕರೆಯುತ್ತಾರೆ. ಭಕ್ತರು ಈ ಒಂದು ತಿಂಗಳಲ್ಲಿ ಯಾವತ್ತೂ

ಬೇಕಾದರೂ ಮೀಸಲು ತುಪ್ಪವನ್ನು ದೀಪದ ಕಂಬಕ್ಕೆ ಅರ್ಪಿಸಿ ಹಣ್ಣು ಕಾಯಿ ಮಾಡಿಸಿಕೊಂಡು ಹೋಗುತ್ತಾರೆ.

ಈ ಜಾತ್ರೆಯ ಇನ್ನೊಂದು ವಿಶೇಷತೆ ಎಂದರೆ ಭಕ್ತರು ಜುಂಜಪ್ಪನಿಗೆ ಅರ್ಪಿಸುವ ಕಾಣಿಕೆಗಳು, ಭಕ್ತರು ತಮ್ಮಲ್ಲಿ ಯಾರಿಗಾದರೂ ಹಾವು ಕಡಿದು, ಚೇಳು ಕಡಿದು, ಮಂಡರಗಪ್ಪೆ ಕಡಿದು ವಾಸಿಯಾದರೆ ಅಥವಾ ದನಗಳಿಗೆ ಉಣ್ಣೆತ್ತಿದರೆ ಚಿನ್ನದ, ಬೆಳ್ಳಿಯ, ಹಾವು, ಚೇಳು, ಮಂಡರಗಪ್ಪೆಗಳನ್ನು ಜುಂಜಪ್ಪ ದೇವರಿಗೆ ಕಾಣಿಕೆಯಾಗಿ ಅರ್ಪಿಸುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ಈ ಕಾಣಿಕೆಗಳನ್ನು ಮಾರುವ ಅಂಗಡಿಗಳು ಇರುತ್ತವೆ.

ಜುಂಜಪ್ಪನ ಜಾತ್ರೆಗೆ ಕಾಡುಗೊಲ್ಲರಲ್ಲದೆ ಇತರ ಜಾತಿಯ ಜನಗಳು ಬರುತ್ತಾರೆ. ಜಾತ್ರೆಗೆ ಬರಲು ಸಾಧ್ಯವಾಗದೇ ಹೋದಾಗ ಕಳುವಾರಹಳ್ಳಿ ಅಥವಾ ಹಾಗಲವಾಡಿಯ ಕ್ಷೇತ್ರಕ್ಕೆ ಕೆಲವರು ಭಕ್ತರು ವಿಶಿಷ್ಟ ವಾದ್ಯವಾದ ಗಣೆಯನ್ನು ಹೆಗಲ ಮೇಲೆ ಹೊತ್ತು ಅದನ್ನು ನವಿಲುಗರಿಯಿಂದ ಸಿಂಗರಿಸಿ, ತುದಿಯಲ್ಲಿ ಹಾವಿನಾಕಾರದ ತಗಡನ್ನು ಜೋಡಿಸಿ ಅದನ್ನು ಜುಂಜಪ್ಪನೆಂದು ಭಾವಿಸಿ ಹೊತ್ತುಕೊಂಡು ಊರೂರು ತಿರುಗುತ್ತಾರೆ. ಕೈಯಲ್ಲಿ ಒಂದು ಗರುಡ ಗಂಭವನ್ನು ಹಿಡಿದು, ಅದಕ್ಕೆ ಎಣ್ಣೆ ಬತ್ತಿ ಹಾಕಿರುತ್ತಾರೆ.

ಭಕ್ತರು ಮುಡಿಪು ಕಟ್ಟಿಕೊಂಡು ಕಾಣಿಕೆಗಳನ್ನು ಈ ಗರುಡ ಗಂಭದ ಎಣ್ಣೆಗೆ ಹಾಕುತ್ತಾರೆ. ಜುಂಜಪ್ಪನ ಭಕ್ತರಾದ ಈ ದಾಸಯ್ಯಗಳು ಭಕ್ತರಿಂದ ಕಾಣಿಕೆಗಳನ್ನು ಸಂಗ್ರಹ ಮಾಡಿಕೊಂಡು ಜಾತ್ರೆಯ ಸಂದರ್ಭದಲ್ಲಿ ಜುಂಜಪ್ಪನಿಗೆ ಅರ್ಪಿಸುತ್ತಾರೆ.

**ಜುಂಜಪ್ಪನ ಮೂಲ ಮೂರ್ತಿ**

ಜುಂಜಪ್ಪನ ಮೂಲ ಮೂರ್ತಿ ಅತ್ಯಂತ ವಿಶಿಷ್ಟವಾದುದಾಗಿದೆ. ಮೂಲ ಮೂರ್ತಿ ಒಂದು ಬಿದಿರು ಕಡ್ಡಿಯೇ ಆಗಿರುತ್ತದೆ. ಆದರೆ ಉತ್ಸವ ಮೂರ್ತಿಯಲ್ಲಿ ಅವನು ಕುದುರೆಯ ಮೇಲೆ ಕೂತಿರುವಂತೆ ಹಾವು, ಚೇಳು, ಮಂಡರಗಪ್ಪೆಗಳಿಂದ ಅಲಂಕರಿಸಲ್ಪಟ್ಟಿದ್ದಾನೆ. ಉತ್ಸವ ಮೂರ್ತಿಯನ್ನು ಅಡ್ಡಣಿಗೆಯ ಮೇಲೆ ತೆಗೆದುಕೊಂಡು ನಾಲ್ಕು ಜನ ಹೊತ್ಕೊಂಡು ಹೋಗುತ್ತಾರೆ. ಗಣೆಗೆ ಸರ್ಪದ ಹೆಡೆಯಾಕಾರದ ತಗಡನ್ನು ಸಿಕ್ಕಿಸಿಕೊಂಡು, ನವಿಲು ಗರಿಯನ್ನು ಜೋಡಿಸಿರುವುದೂ ಜುಂಜಪ್ಪ ದೇವರಾಗಬಹುದು.

ಪುರಾಣದಲ್ಲಿ ಬರುವ ಉಲ್ಲೇಖವನ್ನು ಇಲ್ಲಿ ತಿಳಿಸಲಾಗಿದೆ. ಅವನು ಸಿನ್ನಮ್ಮನ ನಡುಬೆನ್ನಿನಿಂದ ಹುಟ್ಟಿದವನು, ಹುಟ್ಟುತ್ತಲೇ ಹುತ್ತದ ಮೇಲೆ ಕೂತವನು. ಅವನಿಗೆ ನಾಗರಹಾವಿನ ಹಾಸಿಗೆಯಂತೆ, ನಾಗರ ಹೆಡೆಯೇ ದಿಂಬಂತೆ, ಚೇಳಿನ ಗದ್ದುಗೆ ಅವನ

ಬಿರುದು ಈ ರೀತಿ "ನಾಗರ ಹಾವಿನ ಗಂಡ ನಾಕು ಲೋಕಕೆ ಮಿಂಡ ಬೂದಿ ಮುಚ್ಚಿ ಕೆಂಡ ಉಗ್ಗದ ಗಡಿಗ್ಯೋನು ಜಂಗಳನೆ ಕುದುರೋನು ಜೊಂಪಾಲೆ, ಕೈಯಲ್ಲಿ ಕತ್ತರ ಬಾಣ ನೆತ್ತೀಲಿ ನೆತ್ತರ ಬಾಣ, ಅಂಗೈಲಿ ಹಾವಿನ ಬಾಣ, ಮುಂಗೈಲಿ ಚೇಳನಬಾಣ ಪಕ್ಕೆಗೆ ಐನೂರು ಬಾಣ, ಸುಕ್ಕೆಸುರನಾರಿ, ದೊಕ್ಕೆಗೆ ಆರ್ನೂರು, ಮುಡೆವಿಗೆ ಮುನ್ನೂರು ಬಾಣ, ನಡುವಿಗೆ ನಾನೂರು ಬಾಣ ಮರಬಿಲ್ಲು ಧರಿಸಿದವನು ವಿರಾಧಿವೀರ ಈಶ್ವರನ ಮಗ ವೀರಭದ್ರ.

ಹೀಗೆ ಗೊಲ್ಲರು ಜುಂಜಪ್ಪನ ಮೇಲೆ ಅಪಾರ ಭಕ್ತಿ ಮತ್ತು ನಂಬಿಕೆಗಳನ್ನು ಇಟ್ಟುಕೊಂಡ ಆರಾಧ್ಯ ದೈವವೆಂದು ಭಾವಿಸಿದ್ದಾರೆ.

**ಜುಂಜಪ್ಪನ ಬಸವ**

ಜುಂಜಪ್ಪನ ಭಕ್ತರಲ್ಲಿ ಯಾರು ಬೇಕಾದರು ಜುಂಜಪ್ಪನ ಹೆಸರಿನಲ್ಲಿ ಬಸವನನ್ನು ಬಿಡುವಂತಿಲ್ಲ. ಇದು ಹರಕೆಯೂ ಅಲ್ಲ. ಜುಂಜಪ್ಪ ಕಾಡುಗೊಲ್ಲರಲ್ಲಿ ಯಾರಿಗೆ ಕನಸಿನಲ್ಲಿ ಕಾಣಿಸಿಕೊಳ್ಳುತ್ತಾನೋ ಅವರು ಮಾತ್ರ ಬಸವನನ್ನು ಬಿಡಬೇಕು. ಇದು ಅವರ ನಂಬಿಕೆಯಾಗಿದೆ. ಜುಂಜಪ್ಪ ಕನಸಿನಲ್ಲಿ ಕಂಡು ಬಸವನನ್ನು ಬಿಡದಿದ್ದರೆ ಆ ವ್ಯಕ್ತಿಗೆ ಸರ್ಪ ಕಾಣಿಸಿಕೊಳ್ಳುವುದೆಂದು ನಂಬಿಕೆ ಇದೆ. ಇನ್ನೂ ಅಲಕ್ಷ್ಯ ಮಾಡಿದರೆ ಕೆಟ್ಟ ಪರಿಸ್ಥಿತಿಗಳು ಬರುವುದಂತೆ.

ಜುಂಜಪ್ಪ ಕನಸಿನಲ್ಲಿ ಕಂಡ ತಕ್ಷಣ ಆ ವ್ಯಕ್ತಿ ತನ್ನಲ್ಲಿರುವ ಹೋರಿ ಕರುವನ್ನು ಜುಂಜಪ್ಪನ ದೇವಸ್ಥಾನಕ್ಕೆ ಕರೆದುಕೊಂಡು ಬರುತ್ತಾನೆ. ಅದರ ಮೈತೊಳೆದು, ಅದಕ್ಕೆ ಹಾಲುಮೊಸರಿನ ಅಭಿಷೇಕ ಮಾಡಿ, ೩ ಬಗೆಯ ಎಣ್ಣೆಯನ್ನು ಅದರ ಕೊಂಬಿಗೆ ಮತ್ತು ಕಾಲಿಗೆ ಸವರುತ್ತಾರೆ. ಅನಂತರ ದೇವರ ಬಾವಿಯ ನೀರಿನಿಂದ ತೊಳೆದು ಅದಕ್ಕೆ ದೇವರ ಮೇಲಿನ ಹಾರವನ್ನು ಹಾಕುತ್ತಾರೆ. ಅಂದಿನಿಂದ ಆ ಹೋರಿ ಕರು ಜುಂಜಪ್ಪನ ಬಸವನಾಗುತ್ತದೆ.

ಅದು ಎಲ್ಲಿಬೇಕಾದರೂ ಮೇಯಬಹುದು, ಅದನ್ನು ಯಾರು ಅಡ್ಡಿಪಡಿಸು-ವಂತಿಲ್ಲ. ಹೀಗೆಯೇ ಆ ಹೋರಿಕರು ಮೇಯ್ದು ದೊಡ್ಡ ಬಸವನಾಗುತ್ತದೆ. ಈ ಬಸವ ಜುಂಜಪ್ಪನ ಪ್ರತಿನಿಧಿ. ಬಸವನನ್ನು ಮುಂದೆ ಬಿಟ್ಟುಕೊಂಡು ಪೂಜಾರರು ಊರಿಂದ ಅದರ ಹಿಂದೆಯೇ ಹೋಗುತ್ತಾರೆ. ಅದು ಹೋದ ಕಡೆ ಅವರು ಹೋಗಬೇಕು. ಅದು ಎಲ್ಲಿಗೆ ಹೋಗಿ ಊರುಗಳಲ್ಲಿ ಬಿಡಾರ ಬಿಡುತ್ತದೆ ಯಾರ ಮನೆ ಬಳಿಗೆ ಹೋಗುತ್ತದೆಯೋ ಅಲ್ಲಿಗೆ ಅದಕ್ಕೆ ಆಹಾರವನ್ನು ತಿನ್ನಲು ಕೊಡುತ್ತಾರೆ. ಅದಕ್ಕೆ ಕಂಬಳಿಯ ಗದ್ದುಗೆಯನ್ನು ಮಾಡಿ ಅದನ್ನು ಅದರ ಮೇಲೆ ಮಲಗಿಸುತ್ತಾರೆ. ಪೂಜಾರಿಯ ಕೈಗೆ ಜುಂಜಪ್ಪನ ಕಾಣಿಕೆಯನ್ನು ನೀಡುತ್ತಾರೆ. ಬಸವ ಊರೂರು

ಸುತ್ತಿದಾಗ ದೊರೆಯುವ ಅಕ್ಕಿ, ಕಾಣಿಕೆ ಮೊದಲಾದವನ್ನು ೩ ಭಾಗ ಮಾಡಿ ಒಂದು ಭಾಗ ದೇವರಿಗೆ, ಇನ್ನೊಂದು ಭಾಗ ಪೂಜಾರಿಗೆ, ಮತ್ತೊಂದು ಭಾಗ ವಾದ್ಯದವರಿಗೆ. ಕಾಡುಗೊಲ್ಲರು ಜುಂಜಪ್ಪನ ಬಸವನನ್ನು ಶಾಸ್ತ್ರ ಕೇಳುತ್ತಾರೆ. ಮಕ್ಕಳಿಲ್ಲದ ಹೆಂಗಸರನ್ನು ಮಲಗಿಸಿ ಬಸವನಿಂದ ದಾಟಿಸುತ್ತಾರೆ. ದಾಟಿದರೆ ಮಕ್ಕಳಾಗುತ್ತದೆ ಎಂದೂ, ದಾಟುದಿದ್ದರೆ ಮಕ್ಕಳಾಗುವುದಿಲ್ಲ ಎಂದು ತಿಳಿಯುತ್ತಾರೆ. ಬಾವಿ ತೆಗೆಯುವಾಗಲೂ ಜುಂಜಪ್ಪನ ಬಸವನ ನೆರವನ್ನು ಪಡೆಯುತ್ತಾರೆ. ಬಸವ ಆ ಜಾಗದಲ್ಲಿ ಓಡಾಡಿ ಯಾವುದೋ ಒಂದು ಕಡೆ ನೆಲವನ್ನು ಕೆರೆದು ಗಂಜಲವನ್ನು ಹುಯ್ಯುತ್ತದೆ. ಆ ಜಾಗದಲ್ಲಿ ನೀರಿದೆ ಎಂಬ ನಂಬಿಕೆ ಇದೆ.

ಜುಂಜಪ್ಪನ ಬಸವನಗೆ ಬೀಜ ಹೊಡೆಯುವುದಿಲ್ಲ. ಆದರೆ ಅನುಭವಸ್ಥರಿಂದ ಬೀಜ ತಳ್ಳಿಸಿರುತ್ತಾರೆ. ಬಸವನಿಗೆ ಯಾವುದೇ ಊನವಾಗುವಂತಿಲ್ಲ. ಹಾಗಾದರೆ ಅದನ್ನು ಪೂಜಿಸುವುದಿಲ್ಲ. ಬಸವ ಸತ್ತಾಗ ಅದನ್ನು ಗೌರವದಿಂದ ಮೆರವಣಿಗೆ ಮಾಡಿ ಸಮಾಧಿಯಲ್ಲಿ ಹೂತು ಅದನ್ನು ಪವಿತ್ರ ಸ್ಥಳವೆಂದು ಪೂಜಿಸುತ್ತಾರೆ.[೧]

ಜುಂಜಪ್ಪನ ಬಸವನ ಕಲ್ಪನೆಯ ಮೂಲ ಜುಂಜಪ್ಪನ ಕಾವ್ಯದಲ್ಲಿ ದೊರೆಯುತ್ತದೆ. ಚೇಳೂರು ಕೋಟೆಯನ್ನು ಬೇದಿಸಿಕೊಂಡು ಉತ್ತರ ಗುಡ್ಡಕ್ಕೆ ನೆಗೆದು ಜುಂಜಪ್ಪನ ದನಗಳನ್ನು ರಕ್ಷಿಸಿದ ಸಾಹಸ ಕಾರ್ಯ ಮಾಡಿದ ಬಡಮೈಲ ಎಂಬ ಹೋರಿಯ ಪ್ರತೀಕವಾಗಿದೆ. ಜುಂಜಪ್ಪನ ಬಸವನ ಮೇಲೆ ನಗಾರಿ ಹೇರುವಂತಿಲ್ಲ, ಸವಾರಿ ಮಾಡುವಂತಿಲ್ಲ, ಇದು ದೇವರ ಪ್ರತಿನಿಧಿ ಎಂಬ ಕಲ್ಪನೆ ಕಾಡುಗೊಲ್ಲರ ಸಂಪ್ರದಾಯದ ನಂಬಿಕೆಯಾಗಿದೆ.

**ಜೆನ್ನಿಗೆ ಕುರಿ**

ಜುಂಜಪ್ಪನ ಕಾವ್ಯದಲ್ಲಿ ವಿಚಾರ ಮಾಡಬೇಕಾದ ವಿಷಯ ಈ 'ಬೆನ್ನಿಗೆಕುರಿ' ಇದು ಜುಂಜಪ್ಪನ ಕಾವ್ಯದಲ್ಲೂ ಉಲ್ಲೇಖವಿದೆ. ಇದು ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಬಳಸುವ ಹೆಣ್ಣುಕುರಿ. ಇದರ ಹಾಲು ಬಹಳ ಪವಿತ್ರವಾದುದೆಂದು, ಮಗು ಹುಟ್ಟಿದ ಸಂದರ್ಭದಲ್ಲಿ ತಾಯಿ ಮತ್ತು ಮಗವನ್ನು ಪರಿಶುದ್ಧಿಗೊಳಿಸಲು ಪೂಜಾರಿ ಕುಡಿಸುತ್ತಾನೆ. ಹಟ್ಟಿಯಲ್ಲಿರುವ ಕುರಿಗಳಲ್ಲಿ ಯಾವುದನ್ನು ಜನ್ನಿಗೆ ಕುರಿ ಮಾಡಬೇಕೆಂದು ದೇವರನ್ನು ಶಾಸ್ತ್ರ ಕೇಳುತ್ತಾರೆ. ದೇವರು ಹೂವಿನ ಪ್ರಸಾದದ ಮೂಲಕವಾಗಲಿ, ಗಣೆಯ ಮೂಲಕವಾಗಲಿ ಸೂಚಿಸಿದರೆ ಆ ಹೆಣ್ಣು ಕುರಿಮರಿಯ ಬಲಗಿವಿಯನ್ನು ಉದ್ದುದ್ದಕ್ಕೆ ೩ ನಾಮದ ಆಕಾರದಲ್ಲಿ ಸೀಳುತ್ತಾರೆ. ಅದನ್ನು 'ಜೆನ್ನಿಗೆ

೧. ಜಾನಪದ ಸಮೀಕ್ಷೆ, ಡಾ. ತೀ.ನಂ.ಶಂಕರನಾರಾಯಣ, ಪು. ೨೮೬

ಕುರಿ' ಎಂದು ಗುರ್ತಿಸುತ್ತಾರೆ. ಇದನ್ನು ಪ್ರತ್ಯೇಕವಾಗಿ ಸಾಕದೆ ಕುರಿ ಮಂದೆಯಲ್ಲೇ ಸಾಕುತ್ತಾರೆ.

ಅದು ಯಾವ ಗಂಡು ಕುರಿಯೊಡನೆ ಬೇಕಾದರೂ ಸಂಬಂಧ ಬೆಳೆಸಬಹುದು. ಯಾವ ಕುರಿಮಂದೆಯಲ್ಲಿ ಬೇಕಾದರೂ ಇರಬಹುದು. ಈ ಕುರಿಯನ್ನು ಯಾರೂ ದಂಡಿಸುವಂತಿಲ್ಲ. ಕರುಬರು ಈ ಕುರಿಯ ತುಪ್ಪಟ ಕತ್ತರಿಸುತ್ತಾರೆ. ಈ ಜೆನ್ನಿಗೆ ಕುರಿಗೆ ಹೆಣ್ಣುಮರಿ ಹುಟ್ಟಿದರೆ ಅದರ ಬಲಗಿಯನ್ನು ಉದ್ದವಾದ ನಾಮದಾಕಾರದಲ್ಲಿ ೩ ಕಡೆ ಸೀಳಿ ಅದನ್ನು ಜೆನ್ನಿಗೆ ಕುರಿಯಾಗಿಸುತ್ತಾರೆ. ಗಂಡು ಮರಿ ಹುಟ್ಟಿದರೆ ಅದನ್ನು ಮಾರಿ ದೇವರ ಹೆಸರಿನಲ್ಲಿ ಹಣ ಇಡುತ್ತಾರೆ. ಜೆನ್ನಿಗೆ ಕುರಿ ಸತ್ತರೆ ಕಾಡುಗೊಲ್ಲರು ತಿನ್ನಬಹುದು. ಆದರೆ ಅದರ ಯಾವ ಭಾಗವೂ ನಾಯಿ, ನರಿಯ ಪಾಲಾಗಬಾರದು, ಅಕಸ್ಮಾತ್ ಈ ಕುರಿಯನ್ನು ತಿನ್ನದೇ ಒಂದು ಕಲ್ಲನ್ನು ಕಟ್ಟಿ ಕೆರೆ ಅಥವಾ ಬಾವಿಗೆ ಮುಳುಗಿಸುತ್ತಾರೆ. ಇಲ್ಲದಿದ್ದರೆ ತಿಂದು ಉಳಿದ ಭಾಗವನ್ನು ಗುಂಡಿಯಲ್ಲಿ ಮುಚ್ಚುತ್ತಾರೆ. ಅದರ ಮೇಲೆ ಕುರಿಗೊಬ್ಬರವನ್ನು ಹಾಕುತ್ತಾರೆ. ಜೆನ್ನಿಗೆ ಕುರಿ ಎಲ್ಲಾ ಹಟ್ಟಿಗಳಲ್ಲಿ ಇರುವುದಿಲ್ಲ ಕೆಲವು ಹಟ್ಟಿಗಳಲ್ಲಿ ಮಾತ್ರ ಇರುತ್ತದೆ. ಉಳಿದ ಹಟ್ಟಿಯವರು ತಮಗೆ ಅಗತ್ಯಬಿದ್ದಾಗ ತೆಗೆದುಕೊಂಡು ಹೋಗುತ್ತಾರೆ. ಮಗು ಹುಟ್ಟಿದ ಸಂದರ್ಭದಲ್ಲಿ ಬಾಣಂತಿ ಮೂರು ತಿಂಗಳ ಕಾಲ ಹಟ್ಟಿಯ ಕಳ್ಳೇಬೇಲಿಯಿಂದ ಹೊರಗಡೆ ದೂರದಲ್ಲಿ ೩ ತಿಂಗಳು ಇರಬೇಕಾಗುತ್ತದೆ. ಪೂಜಾರಿಯು ಮಗು ಮತ್ತು ತಾಯಿಗೆ ಹಾಲನ್ನು ಕುಡಿಸುತ್ತಾನೆ. ಇದನ್ನು 'ಹೊರಜೆನ್ನಿಗೆ' ಎಂದು ಕರೆಯುತ್ತಾರೆ. ಹಟ್ಟಿಯ ದೇವಸ್ಥಾನದ ಸುತ್ತ ಇರುವ ಕಳ್ಳೇಬೇಲಿಯನ್ನು ದಾಟಿ ಅಲ್ಲಿನ ಬಾಗಿಲಿಗೆ ಬಂದಾಗ ಅಲ್ಲಿ ಪೂಜಾರಿ ಇನ್ನೊಂದು ಸಲ ಮಗು ಮತ್ತು ಬಾಣಂತಿಗೆ ಜೆನ್ನಿಗೆ ಹಾಲನ್ನು ಕುಡಿಸುತ್ತಾನೆ. ಇದನ್ನು 'ಒಳಜೆನ್ನಿಗೆ' ಎನ್ನುತ್ತಾರೆ. ಅಲ್ಲಿಗೆ ಬಾಣಂತಿಗೆ ೪ ಮಗುವಿಗೆ ಸೂತಕ ಕಳೆದು ಪರಿಶುದ್ಧರಾಗುತ್ತಾರೆ. ಈ ಒಂದು ಸಂದರ್ಭವನ್ನು ಬಿಟ್ಟು ಬೇರೆ ಯಾವ ಸಂದರ್ಭದಲ್ಲಿಯೂ ಜೆನ್ನಿಕುರಿ ಹಾಲನ್ನು ಬಳಸುವಂತಿಲ್ಲ.[೧]

ಜುಂಜಪ್ಪನ ಕಾವ್ಯದಲ್ಲೂ ಈ ಜೆನ್ನಿಗೆ ಕುರಿಯ ಉಲ್ಲೇಖವಿದ್ದು ಜುಂಜಪ್ಪನಿಗೆ ಈ ಎಲ್ಲಾ ನಿಯಮಗಳು ಅನ್ವಯವಾಗಿದ್ದವು. ಆದ್ದರಿಂದ ಕಾಡುಗೊಲ್ಲರು ಇಂದಿಗೂ ಜೆನ್ನಿಗೆ ಕುರಿಯ ಬಗ್ಗೆ ಗೌರವವಾಗಿ ನಡೆದುಕೊಂಡ, ಅದೇ ಪದ್ಧತಿಯನ್ನು ಅನುಸರಿಸುತ್ತಾರೆ.

---

೧. ಜಾನಪದ ಸಮೀಕ್ಷೆ-ವಿಶ್ಲೇಷಣೆ, ಡಾ.ತೀ.ನಂ.ಶಂಕರನಾರಾಯಣ, ಪು. ೨೮೮.

# ಉಪಸಂಹಾರ

ಒಟ್ಟು ರಾಷ್ಟ್ರ ಜೀವನವನ್ನೇ ಸಮಗ್ರವಾಗಿ ಬಿಂಬಿಸುವ ಕಾವ್ಯಗಳನ್ನು ಮಹಾಕಾವ್ಯಗಳೆಂದು ಪರಿಗಣಿಸಲಾಗುತ್ತದೆ. ಇತ್ತೀಚೆಗೆ ವಾಕ್ಪರಂಪರೆಯ ಮಹೋನ್ನತ-ಗಳನ್ನು ಗುರುತಿಸುವುದನ್ನು ಕಾಣುತ್ತೇವೆ. ಜನಪದರಲ್ಲಿ ಮಹಾಕಾವ್ಯ ಎಂಬ ಪರಿಕಲ್ಪನೆ ಇಲ್ಲ. ಇಂದಿಗೂ ಹಾಡು, ಪದ, ಕಥೆ ಎಂಬ ಪ್ರಯೋಗಗಳನ್ನೇ ಬಳಸುತ್ತಾರೆ.

ಮೌಖಿಕ ಕಾವ್ಯಗಳು ಸಾಮಾನ್ಯವಾಗಿ ವೀರರ ಸಾಹಸಗಳನ್ನು ಕುರಿತ-ದ್ದಾಗಿರುತ್ತದೆ. ಗಾತ್ರದಲ್ಲಿ ವಿಸ್ತಾರವಾಗಿರುತ್ತದೆ. ವೀರ ತನ್ನ ಗುಂಪಿನ ಹಿತರಕ್ಷಣೆಗಾಗಿ ವಿರೋಧಿಗಳೊಡನೆ ಹೋರಾಡಿ ಮರಣಿಸಿದ ನಂತರ ಆತನನ್ನು ದೇವರೆಂದು ಪೂಜಿಸುವುದು ವಾಡಿಕೆ ಇದೆ. ವೀರನೊಬ್ಬನ ಸಾಹಸಗಾಥೆ ಜನರ ಹೃದಯಾಂತರಾಳ-ವನ್ನು ಪ್ರವೇಶಿಸಿ ಪುರಾಣವಾಗಿ ಅದು ಮಾರ್ಪಟ್ಟು ಕಥನರೂಪದಲ್ಲಿ ಅಭಿವ್ಯಕ್ತಿ-ಗೊಂಡಾಗ ವಸ್ತುನಿಷ್ಠ ಕಾವ್ಯವೆಂದು ರೂಪುಗೊಳ್ಳುತ್ತದೆ. ಈ ಕಾವ್ಯ ಕಂಠಸ್ಥವಾಗಿ ಸಾಗಿ ಬರುವುದರಿಂದ ಕಾಲದಿಂದ ಕಾಲಕ್ಕೆ ಬದಲಾವಣೆಗಳನ್ನು ಹೊಂದುತ್ತಾ ಬೆಳೆಯುತ್ತದೆ. ಇದರಿಂದ ಇದರ ಗಾತ್ರ, ಪಾತ್ರ, ಸೂತ್ರಗಳು ವಿಸ್ತರಿಸುತ್ತಾ ಹೋಗುತ್ತವೆ.

ಹೀಗೆ ಬೆಳೆದ ಕಾವ್ಯ ಒಬ್ಬ ವ್ಯಕ್ತಿಯ ಸ್ವತ್ತಾಗುವುದಿಲ್ಲ. ಅದು ಆ ನಾಡಿನ, ಆ ಗುಂಪಿನ, ಆ ಭಾಷೆಯ ಜೀವನಾಡಿಯಂತಿರುವ ಸಂಸ್ಕೃತಿಯ ಪ್ರತೀಕವಾಗಿ ಇಡಿ ಗುಂಪಿನ ಸಮಷ್ಟಿ ಪ್ರಜ್ಞೆಯ ಪ್ರತಿರೂಪವಾಗಿ ಜನತೆಯ ಔನತ್ಯದ ಸಂಕೇತವಾಗಿ ಆವಿರ್ಭವಿಸುತ್ತದೆ. ಈ ರಚನೆ ಒಬ್ಬ ಕವಿಯಿಂದ ರಚನೆಯಾದುದಲ್ಲ ಇಡೀ ಸಮುದಾಯಕ್ಕೆ ಸಮಗ್ರವಾಗಿರುವುದರಿಂದ ಇದನ್ನು 'ಜನಪದ ಮಾಹಾಕಾವ್ಯ' ಎಂದು ಕರೆಯಲಾಗುತ್ತದೆ.

ಜನಪದ ಕಾವ್ಯಗಳಲ್ಲಿ ಆರಂಭದಲ್ಲಿ ವಿಕಾಸದ ಕಥೆ ಸಹಜ ಊಹೆಗೆ ಎಟಕುವಂಥದ್ದು. ಒಬ್ಬರ ಯತ್ನದಿಂದ ಒಂದು ಪ್ರಸಂಗ ನಿರ್ಮಾಣವಾಗಿ ಮತ್ತೊಬ್ಬರಿಂದ ಕಥಾನಕ ಸೃಷ್ಟಿಯಾಗಿ ಅದು ಹಲವಾರು ವ್ಯಕ್ತಿಗಳಿಂದ ವಿಕಾಸ ಹೊಂದುತ್ತದೆ. ಹೀಗೆ ಒಂದು ಕಥಾನಕದ ಮೇಲೆ ಮತ್ತೊಂದು ಕಥಾನಕ ಮೈಚಾಚುತ್ತಾ ಬೆಳೆದು ಮಹಾಕಾವ್ಯವಾಗಿ ರೂಪುಗೊಂಡಿವೆ. ಒಂದು ವ್ಯವಸ್ಥಿತ ಕ್ರಮದಲ್ಲಿ ಸಂಯೋಜಿಸಿ ಅದಕ್ಕೆ ಒಂದು ಚೌಕಟ್ಟನ್ನು ರೂಪಿಸಿದವರು ವಿದ್ವಾಂಸರು. ಈ ಜನಪದ ಕಾವ್ಯಗಳು ರೂಪುಗೊಂಡಿದ್ದು ಜನರಲ್ಲಿನ ಸ್ವಾಭಿಮಾನ, ನಾಡಿನ ಅಭಿಮಾನ, ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಕಟ್ಟಿ ಹಾಡಿದೆ ಕಥೆಗಳೇ ಜನಪದ ಕಾವ್ಯಗಳಾಗಿವೆ.

ಜನಪದ ಕಾವ್ಯಗಳಲ್ಲಿ ಜನರ ಹೃದಯವನ್ನು ಸುರೆಗೊಂಡಿರುವ ಜೀವನ ವೃತ್ತಾಂತಗಳು, ಆ ನಾಯಕನಲ್ಲಿ ಭಯ ಭಕ್ತಿಗಳು ವಿಕಾಸ ಹೊಂದುತ್ತಾ ಆಚರಣೆ, ಸಂಪ್ರದಾಯ, ನಂಬಿಕೆಗಳು ಇಂದು ಹುಟ್ಟಿಕೊಂಡಿವೆ. ಪುರಾಣದಲ್ಲಿ ಪ್ರಸ್ತಾಪ–ಗೊಂಡಿರುವ ವ್ಯಕ್ತಿ ದೇವರ ಸಮಾನ ಎಂದು ಭಾವಿಸಲಾಗಿದೆ. ಸಾಕ್ಷಾತ್ ಪರಶಿವನೇ ಎಂಬುದು ಜನಪದ ಕಾವ್ಯಗಳಲ್ಲಿ ಮೂಡಿಬಂದಿದೆ.

ಈ ಸಂಪ್ರಬಂಧಕ್ಕೆ ಆರಿಸಿಕೊಂಡ ವಿಷಯ "ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ" ಎಲ್ಲಾ ಜನಪದ ಕಾವ್ಯಗಳನ್ನು ಅಧ್ಯಯನ ಮಾಡಲು ಸಾಧ್ಯವಿಲ್ಲದ ಕಾರಣ ಈ ಸಂಪ್ರಬಂದಕ್ಕೆ ಎಷ್ಟು ಕಾವ್ಯಗಳು ಬೇಕಿತ್ತೋ ಆ ಜನಪದ ಕಾವ್ಯಗಳಲ್ಲಿ ಐದು ಜನಪದ ಕಾವ್ಯಗಳನ್ನು ಅಧ್ಯಯನ ಮಾಡಿ ಈ ವಿಷಯಕ್ಕೆ ಮಾಹಿತಿಗಳನ್ನು ಸಂಗ್ರಹಿಸಿದ್ದು, ಆ ಜನಪದ ಕಾವ್ಯಗಳೆಂದರೆ ಪ್ರೊ. ಪಿ.ಕೆ. ರಾಜಶೇಖರರವರು ಬರೆದಿರುವ 'ಮಲೆಯ ಮಾದೇಶ್ವರ (ಸಂ. ೧, ಮತ್ತು ಸಂ.೨) ಕಾವ್ಯ" ಹಿ.ಶಿ.ಬೋರ ಲಿಂಗಯ್ಯರವರ 'ಮಂಟೇಸ್ವಾಮಿ ಕಾವ್ಯ', ಚೆಲುವರಾಜು ಸಂಪಾದಿಸಿರುವ ಜುಂಜಪ್ಪನ ಕಾವ್ಯ, ಪಿ.ಕೆ.ರಾಜಶೇಖರ ಅವರು ಸಂಪಾದಿಸಿರುವ 'ಪಿರಿಯಾಪಟ್ಟಣ ಕಾಳಗ' ಹಾಗೂ ಮಲೆಯೂರು ಗುರುಸ್ವಾಮಿ ಮತ್ತು ದೇವಯ್ಯ ಹರವೆ ಸಂಪಾದಿಸಿರುವ 'ಚಿಕ್ಕಡಣ್ಣಾಯಕ ಚೆನ್ನಬಸವಣ್ಣ'. ಈ ಜನಪದ ಕಾವ್ಯವನ್ನು ಆರಿಸಿಕೊಂಡು ಇಲ್ಲಿ ಬರುವ ಕೌಟುಂಬಿಕ ವಿಚಾರಗಳನ್ನು ತಿಳಿಸಲು ಪ್ರಯತ್ನಿಸಿದ್ದೇನೆ. ಜನಪದ ಕಾವ್ಯಗಳನ್ನು ಸಂಗ್ರಹಿಸುವ ಕಾರ್ಯ ಇನ್ನೂ ಹೆಚ್ಚಾಗಿ ನಾಡಿನಾದ್ಯಂತ ನಡೆಯಬೇಕಾಗಿದೆ. ಎಷ್ಟೋ ಜನಪದ ಕಾವ್ಯಗಳು ನಾಶ ಹೊಂದುತ್ತಿರುವುದನ್ನು ಕಾಣುತ್ತೇವೆ. ವೃತ್ತಿಗಾಯಕರು ಬೆರಳೆಣಿಕೆಯಷ್ಟು ಮಾತ್ರ ಇದ್ದಾರೆ. ಅವರನ್ನು ಪ್ರೋತ್ಸಾಹಿಸಿ ಅವರಲ್ಲಿರುವಂತಹ ಕಲೆಗಳನ್ನು ಪ್ರತಿಭಾಶಕ್ತಿಯನ್ನು ಹೊರಹೊಮ್ಮಿಸುವಂತೆ ಮಾಡಿ ಜನಪದ ಕಾವ್ಯಗಳ ಸಂಪಾದನೆ ಮಾಡುವುದು ವಿದ್ವಾಂಸರ ಕರ್ತವ್ಯವಾಗಿದೆ. ಇನ್ನೂ ಎಷ್ಟೋ ಜನಪದರಲ್ಲಿ ಕಾವ್ಯಗಳು ಉಳಿದುಕೊಂಡಿವೆ. ಅಂತಹವರನ್ನು ಹುಡುಕಿ ಹೊಸ ಹೊಸ ವಿಚಾರಗಳನ್ನು ಸಂಗ್ರಹಿಸುವುದು ಉತ್ತಮವೆನಿಸುತ್ತದೆ.

ಮಲೆಯ ಮಾದೇಶ್ವರ ಕಾವ್ಯವು ತನ್ನ ವ್ಯಾಪ್ತಿಯನ್ನು ವಿಶಾಲಗೊಳಿಸಿಕೊಂಡಿದ್ದು ಸುಮಾರು ೧೦೦೦ ಪುಟದಷ್ಟು ಗಾತ್ರವನ್ನು ಹೊಂದಿದ್ದು ಇದರಲ್ಲಿ ಬರುವ ಕೌಟುಂಬಿಕ ವಿಚಾರಗಳನ್ನು ತಿಳಿಯಲು ಸಾಧ್ಯವಾದಷ್ಟು ಮಟ್ಟಿಗೆ ಪ್ರಯತ್ನಿಸಿದ್ದೇನೆ. ಹಾಗೆಯೇ ಮಂಟೇಸ್ವಾಮಿ ಕಾವ್ಯ ಕೂಡ ಸುದೀರ್ಘವಾದ ವಿಶಾಲತೆಯಿಂದ ಕೂಡಿದ ಕಾವ್ಯವಾಗಿದೆ. ಇದರಲ್ಲಿ ನನ್ನ ಅರಿವಿಗೆ ಬಂದಂತಹ ಕೌಟುಂಬಿಕ ವಿಚಾರಗಳನ್ನು ತಿಳಿಸಿದ್ದೇನೆ. ಇನ್ನೂ ಹೆಚ್ಚಿನ ವಿಚಾರಗಳನ್ನು ತಿಳಿಯಲು ಸಾಧ್ಯವಾಗಿಲ್ಲ ಮುಂದೆ ಈ

ವಿಷಯದ ಬಗ್ಗೆ ಅಧ್ಯಯನ ಮಾಡುವ ಸ್ನೇಹಿತರು ಇನ್ನೂ ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸಬಹುದಾಗಿದೆ.

ಜುಂಜಪ್ಪನ ಕಾವ್ಯ ಕೂಡ ಕಾಡುಗೊಲ್ಲರ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಅತ್ಯುತ್ತಮವಾದ ಕಾವ್ಯವಾಗಿದ್ದು. ಇದರಲ್ಲಿ ಅನೇಕ ಭಾಗಗಳು ಕಂಡುಬರುತ್ತವೆ. ತುಂಬಾ ದೀರ್ಘವಾದ ಜನಪದ ಕಾವ್ಯ ಕೂಡ ಆಗಿದ್ದು. ಇದರಲ್ಲಿ ಗೊಲ್ಲರ ಕುಟುಂಬ ವ್ಯವಸ್ಥೆ, ಅವರಲ್ಲಿ ವಿವಾಹ, ಶಾಸ್ತ್ರ, ಸಂಪ್ರದಾಯಗಳ ಬಗ್ಗೆ ತಿಳಿಯಲು ಸಾಕಷ್ಟು ಪ್ರಯತ್ನಿಸಿದ್ದು ಇನ್ನೂ ಹೆಚ್ಚಿನ ಅಂಶಗಳನ್ನು ಅಧ್ಯಯನ ಮಾಡಬಹುದಾಗಿದೆ. ಮುಂದೆ ಅಧ್ಯಯನ ಮಾಡಬಯಸುವ ಸ್ನೇಹಿತರು ಉತ್ತಮವಾದ ವಿಚಾರಗಳನ್ನು ಸಂಗ್ರಹಿಸಬಹುದಾಗಿದೆ. ನನ್ನ ಅನುಭವಕ್ಕೆ ಬಂದಿರುವಷ್ಟು ಮಾತ್ರ ಮಾಹಿತಿಯನ್ನು ನಾನು ಪಡೆದುಕೊಂಡಿದ್ದೇನೆ ಮುಂದೆ ಬರುವ ಹಲವಾರು ವಿಷಯಗಳ ಬಗ್ಗೆ ಇನ್ನೂ ಅಧ್ಯಯನಗಳು ನಡೆಯಬೇಕಿದೆ.

'ಪಿರಿಯಾಪಟ್ಟಣಕಾಳಗ' ಇದು ವೀರಕಾವ್ಯವಾಗಿದ್ದು, ಇದು ಜನಪದರು ತುಂಬಾ ಸೊಗಸಾಗಿ ಹಾಡಿ ಕಟ್ಟಿರುವ ಜನಪದ ವೀರಕಾವ್ಯ ಇಲ್ಲಿ ಸಾಹಸದ ಚಿತ್ರಣಗಳು ಹಾಗೂ ವಿರರಸದ ಕಲ್ಪನೆಗಳೇ ಹೆಚ್ಚಾಗಿ ಕಂಡು ಬಂದರು. ಇಲ್ಲಿ ಬರುವ ಕುಟುಂಬಕ್ಕೆ ಸಂಬಂಧಿಸಿದ ವಿಚಾರಗಳನ್ನು ಹೊರತೆಗೆಯಲು ಪ್ರಯತ್ನಿಸಿದ್ದೇನೆ. ಇದು ಸುದೀರ್ಘವಾದ ಪದ್ಯಗಳನ್ನು ಒಳಗೊಂಡಿದೆ. ನನಗೆ ತೋಚಿದಷ್ಟು ಪದ್ಯಗಳನ್ನು ಅಧ್ಯಯನಕ್ಕೆ ಬಳಸಿಕೊಂಡು ಅದರಲ್ಲಿರುವ ಮಾಹಿತಿಗಳನ್ನು ಸಂಗ್ರಹಿಸಿದ್ದೇನೆ. ಇದರಲ್ಲಿ ಅನೇಕ ವಿಚಾರಗಳು ಇನ್ನೂ ಹುದುಗಿಕೊಂಡಿವೆ. ಅವುಗಳನ್ನು ಹೊರ ತೆಗೆಯಲು ಮುಂದೆ ಅಧ್ಯಯನ ಮಾಡುವ ಸ್ನೇಹಿತರು, ಆತ್ಮೀಯರು ಅಧ್ಯಯನ ನಡೆಸಬಹುದು.

'ಚಿಕ್ಕಡಣ್ಣಾಯಕ ಚೆನ್ನಬಸವಣ್ಣ' ಇದು ಒಂದು ಜನಪದ ಕಥನ ಕಾವ್ಯವಾಗಿದ್ದು, ಚೆನ್ನಬಸವಣ್ಣನ ಹುಟ್ಟಿನ ಕಥೆಯನ್ನು ವೃತಿಗಾಯಕರಿಂದ ಹಾಡಿಸಿ ಸಂಪಾದಿಸಿರುವ ಕಾವ್ಯವಾಗಿದೆ. ಇದರಲ್ಲಿ ಬರುವ ಕೌಟುಂಬಿಕ ಅಂಶಗಳನ್ನು, ವಿಚಾರಗಳನ್ನು ಮಾತ್ರ ನಾನು ತಿಳಿಸಲು ಹೊರಟಿದ್ದು ಉಳಿದ ವಿಚಾರಗಳು ಸಾಕಷ್ಟು ತುಂಬಿದೆ. ಇದನ್ನು ಮುಂದಿನ ಅಧ್ಯಯನಕಾರರು ಅಧ್ಯಯನ ನಡೆಸಲು ಸಹಾಯಕವಾಗಿದೆ. ಇಂತಹ ಸಾವಿರಾರು ವಿಚಾರಗಳು ಈ ಜನಪದ ಕಾವ್ಯಗಳಲ್ಲಿ ಹುದುಗಿಕೊಂಡಿದ್ದು, ಅವುಗಳನ್ನು ಹೊರಹೊಮ್ಮಿಸುವ ಕಾರ್ಯ ಜನಪದ ಕ್ಷೇತ್ರದಲ್ಲಿ ಇನ್ನೂ ಹೆಚ್ಚಾಗಿ ಅಧ್ಯಯನಗಳು ನಡೆಯಬೇಕು.

ಈ ಜನಪದ ಕಾವ್ಯಗಳಲ್ಲಿ ಬರುವ ಭಕ್ತಿ, ನಂಬಿಕೆ, ಆಚರಣೆ, ಸಂಪ್ರದಾಯಗಳು, ಜನರಲ್ಲಿ ಅಲ್ಲಿ ಬರುವ ಪವಾಡ ಪುರುಷರ ಬಗ್ಗೆ ನಂಬಿಕೆಗಳು ಇವುಗಳನ್ನು ತಿಳಿಸಲು

ಸಾಕಷ್ಟು ಪ್ರಯತ್ನಿಸಿದ್ದು ಮತ್ತು ಈ ದೇವತೆಗಳ ಆರಾಧನೆಗಳನ್ನು, ಕೊಂಡೋತ್ಸವ-ಗಳನ್ನು ಜಾತ್ರೆಗಳನ್ನು ಪ್ರತಿ ಗ್ರಾಮಗಳಲ್ಲೂ ನಡೆಸುವ, ಆಚರಿಸುವ ಪದ್ಧತಿ ಇಂದಿಗೂ ಪ್ರಸ್ತುತವಾಗಿದೆ. ಜನಪದ ಕಾವ್ಯಗಳು ಸುದೀರ್ಘವಾದ ಮಾಹಿತಿಗಳನ್ನು ಒಳಗೊಂಡಿರುವ ಕಾವ್ಯಗಳು. ಆದ್ದರಿಂದ ನನ್ನ ಈ ಸಂಪ್ರಬಂಧಕ್ಕೆ ಎಷ್ಟು ಮಾಹಿತಿ ಬೇಕೋ ಅಷ್ಟನ್ನು ನಾನು ತಿಳಿಯಲು ಪ್ರಯತ್ನಿಸಿದ್ದೇನೆ. ಇನ್ನೂ ಅನೇಕ ಅಂಶಗಳನ್ನು ಮಾಹಿತಿಗಳನ್ನು ತಿಳಿಯಬಹುದಾಗಿದೆ.

ಈ ಜನಪದ ಕಾವ್ಯಗಳು ತುಂಬಾ ವಿಶಾಲವಾದ ವ್ಯಾಪ್ತಿಯನ್ನು ಹೊಂದಿದ್ದು 'ಕೌಟುಂಬಿಕ ಪರಿಕಲ್ಪನೆ' ತುಂಬಾ ಆಳವಾದ ವಿಷಯವಾಗಿದೆ. ಇದು ಪ್ರೌಢ ಪ್ರಬಂಧಕ್ಕೆ ಸಂಬಂಧಿಸಿದ ವಿಷಯವಾಗಿದೆ. ಆದರೆ ನಾನು ಈ ಸಂಪ್ರಬಂಧವನ್ನು ತಯಾರಿಸಲು "ಜನಪದ ಕಾವ್ಯಗಳಲ್ಲಿ ಕೌಟುಂಬಿಕ ಪರಿಕಲ್ಪನೆ" ಎಂಬ ಶೀರ್ಷಿಕೆಯನ್ನು ಇಟ್ಟು ನನಗೆ ಲಭ್ಯವಾದ ಮಾಹಿತಿಯ ಪ್ರಕಾರ ಈ ಸಂಪ್ರಬಂಧವನ್ನು ರಚಿಸಿದ್ದೇನೆ. ಇದು ಮುಂದಿನ ಪ್ರಿಯ ಸ್ನೇಹಿತರಿಗೆ ಹಾಗೂ ಆತ್ಮೀಯ ಸಂಶೋಧಕರಿಗೆ ಅನುಕೂಲವಾಗುತ್ತದೆಂದು ಭಾವಿಸಿ ಈ ಅಧ್ಯಯನ ನಡೆಸಿ ಸಂಪ್ರಬಂಧವನ್ನು ತಯಾರಿಸಿದ್ದೇನೆ.

# ಪರಾಮರ್ಶನ ಗ್ರಂಥಗಳು

೧. ಜನಪದ ಮಹಾಕಾವ್ಯ ಮಲೆಯ ಮಾದೇಶ್ವರ (ಸಂಪುಟ–೧)–ಪಿ.ಕೆ.ರಾಜಶೇಖರ

೨. ಜನಪದ ಮಹಾಕಾವ್ಯ ಮಲೆಯ ಮಾದೇಶ್ವರ (ಸಂಪುಟ–೨) – ಪಿ.ಕೆ. ರಾಜಶೇಖರ.

೩. ಮಂಟೇಸ್ವಾಮಿ ಕಾವ್ಯ– ಸಂಪಾದಕರು–ಹಿ.ಶಿ.ಬೋರಲಿಂಗಯ್ಯ

೪. ಬುಡಕಟ್ಟು ಮಹಾಕಾವ್ಯ ಜುಂಜಪ್ಪ– ಸಂಪಾದಕ, ಚೆಲುವರಾಜು

೫. ಮಾದೇಶ್ವರ ಸಮೀಕ್ಷೆ–ಹ.ಜ.ಶಿವಶಂಕರಪ್ಪ

೬. ಚಿಕ್ಕಡಣ್ಣಾಯಕ ಚೆನ್ನಬಸವಣ್ಣ– ಸಂಪಾದಕರು– ಮಲೆಯೂರು ಗುರುಸ್ವಾಮಿ ಮತ್ತು ದೇವಯ್ಯ ಹರವೆ.

೭. ಮಲೆಯ ಮಾದೇಶ್ವರ – ಸಂಪಾದಕರು– ಅರವಿಂದ ಮಾಲಗತ್ತಿ.

೮. ಧರೆಗೆ ದೊಡ್ಡವರು– ಡಾ.ಸುಭಾಷ್ ಭರಣಿ, ಐ.ಪಿ.ಎಸ್.

೯. ಜನಪದ ವೀರಕಾವ್ಯ, ಪಿರಿಯಾಪಟ್ಟಣ ಕಾಳಗ, –ಸಂ– ಪಿ.ಕೆ.ರಾಜಶೇಖರ.

೧೦. ಜಾನಪದ – ಸಮೀಕ್ಷೆ–ವಿಶ್ಲೇಷಣೆ– ಡಾ.ತೀ.ನಂ.ಶಂಕರನಾರಾಯಣ.

೧೧. ಕರ್ನಾಟಕದ ಜನಪದ ಮಹಾಕಾವ್ಯಗಳು– ಡಾ. ತೀ.ನಂ.ಶಂಕರನಾರಾಯಣ

೧೨. ಕನ್ನಡ ವಿಷಯ ವಿಶ್ವಕೋಶ–ಜಾನಪದ – ಮೈಸೂರು ವಿಶ್ವವಿದ್ಯಾನಿಲಯ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ.

೧೩. ಜಾನಪದ ತತ್ತ್ವಗಳು – ಸಂ. ಡಾ. ಆರ್.ವಿ.ಎಸ್.ಸುಂದರಂ, ಡಾ.ಎನ್.ಎಸ್.ತಾರಾನಾಥ್

೧೪. ಜನಪದ ಭಾರತಿ–ಸಂ. ನಲ್ಲೂರು ಪ್ರಸಾದ್

೧೫. ಜನಪದ ಶಿಷ್ಟಪದ – ಡಿ.ಕೆ.ರಾಜೇಂದ್ರ

೧೬. ಜಾನಪದ ಅನ್ವಯಿಕತೆ – ಪ್ರಧಾನ ಸಂಪಾದಕರು: ಹಿ.ಶಿ.ರಾಮಚಂದ್ರೇಗೌಡ, ಸಂಪಾದಕರು: ಪ್ರೊ. ರಂಗಾರೆಡ್ಡಿ ಕೋಡಿರಾಮ್‌ಪುರ ಮತ್ತು ಜಿ.ಆರ್.ತಿಪ್ಪೇಸ್ವಾಮಿ.

